# ಸಾಮಾಜಿಕ ಅಭಿವೃದ್ಧಿಯಲ್ಲಿ 'ಕೆನರಾ ಅಭಿವೃದ್ಧಿ ಮತ್ತು ಶಾಂತಿ ಸಂಸ್ಥೆ'ಯ ಪಾತ್ರ : ವಿದ್ಯಾರ್ಥಿ ಸಾಲ ಯೋಜನೆ ಒಂದು ಅಧ್ಯಯನ

ಹಂಪಿ ಕನ್ನಡ ವಿಶ್ವವಿದ್ಯಾಲಯದ ಎಂ. ಫಿಲ್. ಪದವಿಗಾಗಿ
ಸಾದರಪಡಿಸಿದ ಸಂಪ್ರಬಂಧ
(ಅಭಿವೃದ್ಧಿ ಅಧ್ಯಯನ ವಿಭಾಗ)

ಸಂಶೋಧಕರು
ಜೋರ್ಜ್ ಸುನಿಲ್ ಡಿ'ಸೋಜಾ

ಮಾರ್ಗದರ್ಶಕರು
ಡಾ. ವಾಲ್ಟರ್ ಡಿ'ಸೋಜಾ

೨೦೧೭

ನೋಂದಣಿ ಸಂಖ್ಯೆ : [illegible]

ಕರ್ನಾಟಕ ಥಿಯೊಲಾಜಿಕಲ್ ಸಂಶೋಧನಾ ಕೇಂದ್ರ
ಬಲ್ಮಠ, ಮಂಗಳೂರು - ೫೭೫೦೦೧

# ಸಾಮಾಜಿಕ ಅಭಿವೃದ್ಧಿಯಲ್ಲಿ 'ಕೆನರಾ ಅಭಿವೃದ್ಧಿ ಮತ್ತು ಶಾಂತಿ ಸಂಸ್ಥೆ'ಯ ಪಾತ್ರ : ವಿದ್ಯಾರ್ಥಿ ಸಾಲ ಯೋಜನೆ ಒಂದು ಅಧ್ಯಯನ

ಹಂಪಿ ಕನ್ನಡ ವಿಶ್ವವಿದ್ಯಾಲಯದ ಎಂ. ಫಿಲ್. ಪದವಿಗಾಗಿ
ಸಾದರಪಡಿಸಿದ ಸಂಪ್ರಬಂಧ
(ಅಭಿವೃದ್ಧಿ ಅಧ್ಯಯನ ವಿಭಾಗ)

*ಸಂಶೋಧಕರು*

ಜೋರ್ಜ್ ಸುನಿಲ್ ಡಿ'ಸೋಜಾ

*ಮಾರ್ಗದರ್ಶಕರು*

ಡಾ. ವಾಲ್ಟರ್ ಡಿ'ಸೋಜಾ

೨೦೧೭

ನೋಂದಣಿ ಸಂಖ್ಯೆ – ೧೬೧೧೧೧೦೩೦೦೪೭ ೧

ಕರ್ನಾಟಕ ತಿಯೊಲಾಜಿಕಲ್ ಸಂಶೋಧನಾ ಕೇಂದ್ರ
ಬಲ್ಮಠ, ಮಂಗಳೂರು – ೫೭೫ ೦೦೧

# ಪ್ರಮಾಣ ಪತ್ರ

ಹಂಪಿ ಕನ್ನಡ ವಿಶ್ವವಿದ್ಯಾಲಯದ ಎಂ.ಫಿಲ್. ಪದವಿಗಾಗಿ ಸಾದರಪಡಿಸಿದ ಸಾಮಾಜಿಕ ಅಭಿವೃದ್ಧಿಯಲ್ಲಿ ಕೆನರಾ ಅಭಿವೃದ್ಧಿ ಮತ್ತು ಶಾಂತಿ ಸಂಸ್ಥೆಯ ಪಾತ್ರ : ವಿದ್ಯಾರ್ಥಿ ಸಾಲ ಯೋಜನೆ ಒಂದು ಅಧ್ಯಯನ ಎಂಬ ಶೀರ್ಷಿಕೆಯ ಈ ಸಂಪ್ರಬಂಧವು ನನ್ನ ಸ್ವತಂತ್ರ ಕೃತಿಯಾಗಿದ್ದು ವಿಶ್ಲೇಷಣೆ ಮತ್ತು ಅಧ್ಯಯನದ ಫಲೋದಯವಾಗಿದೆ. ಮಂಗಳೂರಿನ ಕರ್ನಾಟಕ ತಿಯೋಲಾಜಿಕಲ್ ಸಂಶೋಧನಾ ಕೇಂದ್ರದಲ್ಲಿ ಡಾ॥ ವಾಲ್ಟರ್ ಡಿಸೋಜ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ ಈ ಸಂಪ್ರಬಂಧವನ್ನು ಬೇರಾವುದೇ ಪದವಿ, ಡಿಪ್ಲೋಮಾ ಅಥವ ತತ್ಸಮಾನ ಉಪಾಧಿಗಳ ಪ್ರಾಪ್ತಿಗಾಗಿ ಅಥವಾ ಆರ್ಥಿಕ ಲಾಭಕ್ಕಾಗಿ ಇಡಿಯಾಗಿ ಅಥವಾ ಬಿಡಿಯಾಗಿ ಬಳಸಿಕೊಂಡಿಲ್ಲವೆಂದು ನಾನು ಈ ಮೂಲಕ ದೃಢಪಡಿಸುತ್ತೇನೆ.

ದಿನಾಂಕ: ೨೮.೦೭.೨೦೧೭

**ಜೋರ್ಜ್ ಸುನಿಲ್ ಡಿ'ಸೋಜಾ**
ಸಂಶೋಧಕರು
ಕರ್ನಾಟಕ ತಿಯೋಲಾಜಿಕಲ್ ಸಂಶೋಧನಾ ಕೇಂದ್ರ
ಬಲ್ಮಠ, ಮಂಗಳೂರು.

# ಯೋಗ್ಯತಾ ಪತ್ರ

ಜೋರ್ಜ್ ಸುನಿಲ್ ಡಿಸೋಜಾ ಅವರು ನನ್ನ ಸಲಹೆ ಮತ್ತು ಮಾರ್ಗದರ್ಶನದಲ್ಲಿ ಸಾಮಾಜಿಕ ಅಭಿವೃದ್ಧಿಯಲ್ಲಿ ಕೆನರಾ ಅಭಿವೃದ್ಧಿ ಮತ್ತು ಶಾಂತಿ ಸಂಸ್ಥೆಯ ಪಾತ್ರ: ವಿದ್ಯಾರ್ಥಿ ಸಾಲ ಯೋಜನೆ ಒಂದು ಅಧ್ಯಯನ ಎಂಬ ಶೀರ್ಷಿಕೆಯ ಈ ಸಂಪ್ರಬಂಧವನ್ನು ಎಂ.ಫಿಲ್.ಪದವಿ ಪ್ರಾಪ್ತಿಗಾಗಿ ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಬೇಕೆಂದು ಸಿದ್ಧಪಡಿಸಿದ್ದಾರೆ. ಈ ಸಂಪ್ರಬಂಧವು ಸಂಶೋಧಕರ ಸ್ವಂತ ಪರಿಶ್ರಮ, ವಿಶ್ಲೇಷಣೆ, ಅಭಿಪ್ರಾಯ ಸಂಗ್ರಹ ಮತ್ತು ಸಂಶೋಧನೆಯ ಫಲಸ್ವರೂಪವಾಗಿದೆ. ಇವರು ಸಂಪ್ರಬಂಧದ ವಿಷಯವನ್ನು ಅಥವಾ ಇದರ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಪದವಿಗಾಗಲೀ ಅಥವಾ ಇನ್ನಿತರ ಉದ್ದೇಶಗಳಿಗಾಗಿಯಾಗಲೀ ಬಳಸಿಕೊಂಡಿಲ್ಲ.

ದಿನಾಂಕ: ೨೮.೦೭.೨೦೧೭

ಡಾ। ವಾಲ್ಟರ್ ಡಿ'ಸೋಜಾ
ಸಂಶೋಧನ ಮಾರ್ಗದರ್ಶಕರು
ಕರ್ನಾಟಕ ತಿಯೋಲಾಜಿಕಲ್ ಸಂಶೋಧನಾ ಕೇಂದ್ರ
ಬಲ್ಮಠ, ಮಂಗಳೂರು.

Dr. Walter D Souza
Assistant Professor
Govt. First Grade College For Women
Balmatta, MANGALURU - 575 001

## ಸಾಮಾಜಿಕ ಅಭಿವೃದ್ಧಿಯಲ್ಲಿ 'ಕೆನರಾ ಅಭಿವೃದ್ಧಿ ಮತ್ತು ಶಾಂತಿ ಸಂಸ್ಥೆ (ಸಿಓಡಿಪಿ)ಯ ಪಾತ್ರ : ವಿದ್ಯಾರ್ಥಿ ಸಾಲ ಯೋಜನೆ ಒಂದು ಅಧ್ಯಯನ

### ಅಧ್ಯಯನದ ವಿವರಗಳು

# ಕೋಷ್ಟಕಗಳ ಪಟ್ಟಿ

# ಅಧ್ಯಾಯ – ೧

## ಅಧ್ಯಯನದ ಉದ್ದೇಶ, ಸ್ವರೂಪ ಮತ್ತು ವ್ಯಾಪ್ತಿ

### ೧.೧ ಪ್ರವೇಶ

ಸಮಸ್ಯೆಯಿಲ್ಲದ ಸಮಾಜ ಒಂದು ಮಿಥ್ಯೆ. ಎಲ್ಲಾ ಸಮಾಜದಲ್ಲಿಯೂ ಸಮಸ್ಯೆಗಳು ಖಂಡಿತವಾಗಿಯೂ ಇವೆ. ಆದರೆ ಈ ಸಮಸ್ಯೆಗಳು ಹೇಗೆ ಸಾಮಾಜಿಕ ಸಮಸ್ಯೆಗಳಾಗಿ ಪರಿಗಣಿತವಾಗುತ್ತವೆ ಎಂಬುದನ್ನು ಸ್ಪಷ್ಟವಾಗಿ ಹೇಳಲು ಸಾಧ್ಯವಿಲ್ಲ. "ಸಮಾಜವು ತನ್ನ ಪ್ರಸ್ತುತ ಪರಿಸ್ಥಿತಿಯಲ್ಲಿ ಉತ್ತಮಗೊಳಿಸಲು ತೀರ್ಮಾನಿಸುವಾಗ ಆ ಪರಿಸ್ಥಿತಿಗಳು ಸಾಮಾಜಿಕ ಸಮಸ್ಯೆಗಳಾಗುತ್ತವೆ ಎನ್ನುತ್ತಾರೆ ಸಮಾಜಶಾಸ್ತ್ರಜ್ಞ ಪ್ರೊ.ಜಿ.ಸುಬ್ರಹ್ಮಣ್ಯ. (ಸುಬ್ರಹ್ಮಣ್ಯ, ೨೦೧೨) ಹಳ್ಳಿಗಳ ದೇಶ ಭಾರತದಲ್ಲಿ ೭೦%ರಷ್ಟು ಜನರು ಗ್ರಾಮೀಣ ಪರಿಸರದಲ್ಲಿ ವಾಸಮಾಡುತ್ತಾರೆ. ಭಾರತದ ಆತ್ಮ ಹಳ್ಳಿಗಳಲ್ಲಿವೆ ಎಂಬ ಗಾಂಧೀಜಿಯವರ ಮಾತು ಇಂದಿಗೂ ಪ್ರಸ್ತುತ ಎನಿಸಿದೆ. ಈ ಗ್ರಾಮೀಣ ಜನರ ಸಮಸ್ಯೆ ಹಾಗೂ ಪಟ್ಟಣ ಪ್ರದೇಶಗಳ ಜನರ ಸಮಸ್ಯೆಗಳು ಬೇರೆಬೇರೆಯಾಗಿರುತ್ತವೆ. ಸಾಮಾಜಿಕ ಸಮಸ್ಯೆಗಳ ಸ್ವಭಾವ ಹಾಗೂ ಒಂದು ಸಮಾಜ ಒಂದರಲ್ಲಿ ಇರಬಹುದಾದ ಸಮಸ್ಯೆಗಳು ಸಮಾಜದಿಂದ ಸಮಾಜಕ್ಕೆ ವ್ಯತ್ಯಾಸಗೊಳ್ಳುತ್ತವೆ. ಗ್ರಾಮೀಣ ಸಮಸ್ಯೆಗಳಾದ ಸಾರಿಗೆ, ಉತ್ತಮ ಶಿಕ್ಷಣ ಸಂಸ್ಥೆಗಳ ಕೊರತೆ, ಆರೋಗ್ಯ ಸೌಲಭ್ಯದ ಸಮಸ್ಯೆಗಳು, ವಿದ್ಯುತ್ ಶಕ್ತಿಯ ಸಮಸ್ಯೆಗಳು ಇರುವಾಗ ನಗರ ಪ್ರದೇಶದಲ್ಲಿ ಮಾದಕ ವ್ಯಸನ, ಪರಿಸರ ಮಾಲಿನ್ಯ, ನಿರುದ್ಯೋಗ, ವೇಶ್ಯವೃತ್ತಿ, ಕೊಳಚೆ ಪ್ರದೇಶ, ಕಳ್ಳತನ, ದರೋಡೆ ಮುಂತಾದ ಸಮಸ್ಯೆಗಳು ಹೆಚ್ಚಾಗಿ ಕಂಡುಬರುತ್ತವೆ.

ಖಂಡಿತವಾಗಿಯೂ, ಎಲ್ಲಾ ಸಮಾಜದಲ್ಲಿ ವ್ಯವಸ್ಥೆ ಮತ್ತು ಅವ್ಯವಸ್ಥೆಗಳು ಜೊತೆಜೊತೆಯಾಗಿರುತ್ತವೆ. ಯಾವ ಸಮಾಜದಲ್ಲಿ ಪೂರ್ಣವಾದ ವ್ಯವಸ್ಥೆ ಇಲ್ಲ ಸಮಾಜವನ್ನು ಅವ್ಯವಸ್ಥೆಗೊಳಿಸುವ ವಿಘಟಿಸುವ ಶಕ್ತಿಗಳು ಎಲ್ಲಾ ಸಮಾಜದಲ್ಲಿರುತ್ತವೆ. ಯಾವಾಗ ಸಾಮಾಜಿಕ ಸಮಸ್ಯೆಗಳು ಹೆಚ್ಚುತ್ತವೋ ಆಗ ಸಮಾಜ ಸುಲಲಿತವಾಗಿ ಕಾರ್ಯನಿರ್ವಹಿಸಲಾಗದೆ ಸಾಮಾಜಿಕ ಪ್ರಗತಿಯ ಅಂಧಕಾರದ ಪಥವನ್ನು ತುಳಿಯುತ್ತದೆ. ಒಂದು ಸಾಮಾಜಿಕ ಸಮಸ್ಯೆ ಒಂದು ಅಸ್ತಿತ್ವದಲ್ಲಿರಬೇಕಾದರೆ ವಸ್ತುನಿಷ್ಠೆ ಹಾಗೂ ವ್ಯಕ್ತಿನಿಷ್ಠೆ ಈ ಎರಡೂ ಅಂಶಗಳು ಇರಬೇಕಾಗುತ್ತದೆ. ವಸ್ತುನಿಷ್ಠೆ ಸ್ಥಿತಿ ಎಂಬುದು ಸಮಾಜದ ವಾಸ್ತವದಲ್ಲಿರುವ ಪರಿಸ್ಥಿತಿಯಾದರೆ, ಈ ಪರಿಸ್ಥಿತಿಯನ್ನು ಬದಲಿಸಬೇಕು ಎಂಬ ನಂಬಿಕೆಯೇ ವ್ಯಕ್ತಿನಿಷ್ಠ ಭಾಗ. ವ್ಯಕ್ತಿನಿಷ್ಠೆ ಸಮಾಜ ಒಂದರ ಮೌಲ್ಯಗಳ ವಿಕಾಸವನ್ನು ಪ್ರಭಾವಗೊಳಿಸುವ ವ್ಯಕ್ತಿಗಳು ಹಾಗೂ ಚಾರಿತ್ರಿಕ ಶಕ್ತಿಗಳನ್ನು ಒಳಗೊಂಡಿರುತ್ತದೆ. ಆದ್ದರಿಂದ ಹಾರ್ಟನ್ ಮತ್ತು ಲೆಸ್ಲಿಯವರ ಪ್ರಕಾರ ಯಾವುದೇ ಒಂದು ಸಾಮಾಜಿಕ ಸಮಸ್ಯೆ ವ್ಯಕ್ತಿಯೋರ್ವನ ಅಥವಾ ಕೆಲವು ವ್ಯಕ್ತಿಗಳ ಪ್ರಯತ್ನದಿಂದ ಪರಿಹಾರವಾಗುವುದಿಲ್ಲ. ಬದಲಾಗಿ ಸಾಮಾಜಿಕ ಕಾಳಜಿ, ವಿಚಾರ–ವಿನಿಮಯ ಅಭಿಪ್ರಾಯ ಮೂಡಿಸುವಿಕೆ ಹಾಗೂ ಒತ್ತಡಗಳ ಮೂಲಕ ಸಮಸ್ಯೆಯ ಸ್ವರೂಪವನ್ನು ಅರ್ಥಮಾಡಿಕೊಂಡು ಸಾಮೂಹಿಕ ಪ್ರಯತ್ನದಿಂದ ಪರಿಹಾರ ಕಂಡುಕೊಳ್ಳಲು ಸಾಧ್ಯ (ಸುಬ್ರಹ್ಮಣ್ಯ, ೨೦೧೨).

ಎಲ್ಲಾ ಸಮಸ್ಯೆಗಳಿಗೂ ಪರಿಹಾರ ಖಂಡಿತ ಬೇಕು. ಸಾಮಾಜಿಕ ಪ್ರಕ್ರಮವನ್ನು ಹಾಗೂ ಆಯಾ ಸಂಸ್ಕೃತಿಯ ಹಿನ್ನೆಲೆಯನ್ನು ಚೆನ್ನಾಗಿ ಅರ್ಥಮಾಡಿಕೊಂಡು ಅದನ್ನು ಪರಿಹರಿಸುವ ಮಾರ್ಗವನ್ನು ಹುಡುಕಬೇಕಾಗಿದೆ. ಯಾವುದೇ ಒಂದು ಸಮಾಜದಲ್ಲಿ ಮಾನವನ ಅಭಿವೃದ್ಧಿ ಮತ್ತು ಮಾನವನ ಒಳಿತುಗಳೇ ಅಭಿವೃದ್ಧಿಯ ಅಂತಿಮ ಗುರಿ (ಎಚ್. ಆರ್. ಕೃಷ್ಣಮೂರ್ತಿ ಹೊಸಬೀಡು, ೨೦೧೬). ನೋಬೆಲ್ ಪಾರಿತೋಷಕ ಪ್ರೊಫೆಸರ್ ಅಮೃತಸೇನ್‌ರವರ ಪ್ರಕಾರ ಉನ್ನತ ಜೀವನಮಟ್ಟ, ಆರೋಗ್ಯ ಅರಿವು, ಸ್ವಗೌರವ ಸಾಧನೆಗೆ ಮತ್ತು ಸಾಮುದಾಯಿಕ ಜೀವನದಲ್ಲಿ ಪರಿಣಾಮಕಾರಿಯಾಗಿ ಭಾಗವಹಿಸಲು ಅನುವು ಆಗುವಂತೆ ಮಾಡುವ ಜನರ ಸಾಮರ್ಥ್ಯ ಮತ್ತು ಆಯ್ಕೆಯ ಸ್ವತಂತ್ರವನ್ನು ಹೆಚ್ಚಿಸುವುದೇ ಮಾನವನ ಒಳಿತಿನ ಗುರಿಯಾಗಿದೆ (ಅಮರ್ತ್ಯಸೇನ್ ೧೯೯೦). ಈ ಸಾಮಾಜಿಕ ಸಮಸ್ಯೆಗಳಿಗೆ ಪರಿಹಾರ ಮಾಡಿ ಮಾನವನ ಅಭಿವೃದ್ಧಿಯಾಗಬೇಕಾಗಿದೆ. ವಾಸ್ತವವಾಗಿ ಮಾನವನ ಅಭಿವೃದ್ಧಿ ಮತ್ತು ಆರ್ಥಿಕ ಅಭಿವೃದ್ಧಿಗೆ ತುಂಬಾ ನಿಕಟ ಸಂಪರ್ಕವಿದೆ. ಆರ್ಥಿಕ ಅಭಿವೃದ್ಧಿಯ ಗುರಿ ಮಾನವನ ಅಭಿವೃದ್ಧಿ. ಮಾನವನ ಅಭಿವೃದ್ಧಿ ವರದಿ ಮಾನವನ ಅಭಿವೃದ್ಧಿ ಎಂದರೆ ಜನರ ಆಯ್ಕೆಯ ಪರಿಧಿಯನ್ನು ವಿಸ್ತರಿಸುವ ಪ್ರಕ್ರಿಯೆ ಎಂದು ಮಾನವ ಅಭಿವೃದ್ಧಿ ವ್ಯಾಖ್ಯಾನಿಸಿದೆ (೧೯೯೦).

ಆರ್ಥಿಕ ಅಭಿವೃದ್ಧಿ ಪ್ರಕ್ರಿಯೆಯಿಂದ ವಸ್ತುಗಳ ಅನುಭೋಗದ ಅವಕಾಶವನ್ನು ಶ್ರೀಸಾಮಾನ್ಯನು ಪಡೆದಿಲ್ಲ ಎಂದಾದರೆ ಅಭಿವೃದ್ಧಿಗೆ ಯಾವುದೇ ಅರ್ಥವಿಲ್ಲ ಎಂದು ಹೇಳಬಹುದು. ಆದ್ದರಿಂದ ಜನಸಾಮಾನ್ಯರ ಅಭಿವೃದ್ಧಿಯ ಅವಕಾಶಗಳನ್ನು ಆರಂಭಿಸದ ಹೊರತು ಯಾವುದೇ ಅಭಿವೃದ್ಧಿ ಸಾಧ್ಯವಿಲ್ಲ. "ಆದ್ದರಿಂದ ಉತ್ಪಾದನೆ, ವಿತರಣೆ ಹಾಗೂ ಮಾನವ ಅಭಿವೃದ್ಧಿಯ ನಡುವೆ ನಿಕಟ ಸಂಬಂಧವಿದ್ದ ಕಾರಣ ಆರ್ಥಿಕ ಅಭಿವೃದ್ಧಿ ಪ್ರಕ್ರಿಯೆ ಕೇವಲ ಈಗಿನ ಪೀಳಿಗೆಯನ್ನು ಮಾತ್ರ ಗಮನದಲ್ಲಿರಿಸಿಕೊಂಡರೆ ಸಾಲದು ಅದು ಮುಂದಿನ ಪೀಳಿಗೆಯನ್ನು ಪರಿಗಣಿಸಬೇಕು" ಎನ್ನುತ್ತಾರೆ ಬಾಂಬೆ ಅರ್ಥಶಾಸ್ತ್ರ ವಿದ್ಯಾಲಯದ ಮಾಜಿ ನಿರ್ದೇಶಕ ಪ್ರೊ. ಪಿ. ಆರ್. ಬ್ರಹ್ಮಾನಂದ. ಈ ಎಲ್ಲಾ ಸಮಸ್ಯೆಗಳನ್ನು ಅರಿತು ಅಧ್ಯಯನ ಮಾಡುವ ವಿವಿಧ ಸಂಗಟನೆಗಳು, ರಾಜಕೀಯ ಪಕ್ಷಗಳು, ಜಾತಿ ಸಂಘಟನೆಗಳು, ಸರ್ಕಾರೇತರ ಸಂಸ್ಥೆಗಳು, ಸ್ಥಳೀಯ, ರಾಷ್ಟ್ರೀಯ, ಅಂತರರಾಷ್ಟ್ರೀಯ ಮಟ್ಟದಲ್ಲಿ ಕೆಲಸ ಮಾಡುತ್ತವೆ.

ಕರ್ನಾಟಕ ರಾಜ್ಯದ ಮಾನವ ಅಭಿವೃದ್ಧಿಯ ಪ್ರಕಾರ ದ.ಕ. ಜಿಲ್ಲೆ ಸಾಮಾಜಿಕ ಮತ್ತು ಆರ್ಥಿಕವಾಗಿ ಮುಂದುವರಿದಿದ್ದು ಮಾನವ ಅಭಿವೃದ್ಧಿಯಲ್ಲಿ ಪ್ರಗತಿ ಹೊಂದಿದೆ. ಈ ಜಿಲ್ಲೆಯಲ್ಲಿ ಅಲ್ಪಸಂಖ್ಯಾತರ ಸಾಮಾಜಿಕ ಮತ್ತು ಆರ್ಥಿಕ ಅಭಿವೃದ್ಧಿಯಲ್ಲಿ ತೊಡಗಿಸಿಕೊಂಡಿರುವ ಸರ್ಕಾರೇತರ ಸಂಸ್ಥೆಗಳಲ್ಲಿ "ಕೆನರಾ ಅಭಿವೃದ್ಧಿ ಮತ್ತು ಶಾಂತಿ ಸಂಸ್ಥೆ"ಯ ಸಾಮಾಜಿಕ ಅಭಿವೃದ್ಧಿ ಕಾರ್ಯಗಳಲ್ಲಿ ಒಂದಾದ ವಿದ್ಯಾರ್ಥಿ ಸಾಲ ಯೋಜನೆಯ ಸಮಸ್ಯೆ ಹಾಗೂ ಸವಾಲುಗಳ ಕುರಿತು ಈ ಅಧ್ಯಯನವಾಗಿದೆ.

**ಅಲ್ಪಸಂಖ್ಯಾತರ ಸಮಸ್ಯೆಗಳು ಮತ್ತು ಅಭಿವೃದ್ಧಿ**

ಯಾವುದೇ ಪೂರ್ಣಘಟಕದ ಅರ್ಧಕ್ಕಿಂತಲೂ ಕಡಿಮೆಯಾದ ಒಂದು ಭಾಗ ಎಂದು

ಸರಳವಾದ ಅರ್ಥದಲ್ಲಿ ಅಲ್ಪಸಂಖ್ಯಾತರು ಎಂದು ಹೇಳಿದರೂ ಅಲ್ಪಸಂಖ್ಯಾತರು ಎಂಬ ಪರಿಕಲ್ಪನೆಯನ್ನಾಗಿ ಬಳಸುವಾಗ ಹೆಚ್ಚು ಪ್ರಚಲಿತವಾದ ವ್ಯಾಖ್ಯೆಯನ್ನು ನೀಡಬೇಕಾಗುತ್ತದೆ.

ವಿಲಿಯಂ. ಎ. ಸ್ಕಾಟ್‌ರ ಪ್ರಕಾರ ಸಮಾಜವೊಂದರಲ್ಲಿ ಗುರುತಿಸಲು ಶಕ್ಯವಾದಂತಹ, ಜನಾಂಗಿಕ, ಧಾರ್ಮಿಕ ಅಥವಾ ಕುಲಸಂಬಂಧಿ ಸಮೂಹವು ಪೂರ್ವಗ್ರಹ ಹಾಗೂ ತಾರತಮ್ಯತೆಯಂತಹ ಅನಾನುಕೂಲತೆಗಳಿಗೆ ಒಳಗಾಗಿರುವುದಾದಲ್ಲಿ ಅದನ್ನು ಅಲ್ಪಸಂಖ್ಯಾತ ಸಮೂಹ ಎಂದೆನ್ನಬಹುದು.

ಕನ್ನಡ ವಿಶ್ವಕೋಶದಲ್ಲಿ ಹೇಳಿರುವಂತೆ ಯಾವುದೇ ದೇಶದ ಬಹುಜನರ ಬುಡಕಟ್ಟು ಮತ, ಭಾಷೆ, ಆಚಾರ ವ್ಯವಹಾರ ಇತ್ಯಾದಿಗಳು ಒಂದು ತೆರನಾಗಿದ್ದು, ಇವುಗಳಿಂದ ಭಿನ್ನವಾಗಿರುವ ಬುಡಕಟ್ಟು, ಮತ, ಭಾಷೆ ಇತ್ಯಾದಿಗಳನ್ನನುಸರಿಸುವ ಜನ ಸ್ವಲ್ಪವಿದ್ದರೆ ಅದನ್ನು ಅಲ್ಪಸಂಖ್ಯಾತರು ಎನ್ನುತ್ತೇವೆ.

ಈ ಅಲ್ಪಸಂಖ್ಯಾತರು ವಿವಿಧ ಸಮಸ್ಯೆಗಳಿಗೆ ತುತ್ತಾಗಿದ್ದರೆ ಭಾರತದಲ್ಲಿನ ಅವರ ಸಮಸ್ಯೆಯನ್ನು ಮೂರು ರೀತಿಯಾಗಿ ವಿಂಗಡಿಸಬಹುದು.

**ಅಸ್ತಿತ್ವದ ಸಮಸ್ಯೆ:** ಬಹುಸಂಖ್ಯಾತರ ಮಧ್ಯದಲ್ಲಿ ಅಲ್ಪಸಂಖ್ಯಾತರು ತಮ್ಮ ಅಸ್ತಿತ್ವವನ್ನು ಗಿಟ್ಟಿಸಲು ಪರದಾಡಬೇಕಾಗಿದೆ. ಸಮಾಜದ ರಾಜಕೀಯ ವ್ಯವಸ್ಥೆ ಚರಿತ್ರೆ ಮತ್ತು ಹಿನ್ನೆಲೆಗಳಿಂದ ತಮ್ಮತನವನ್ನು ಗಿಟ್ಟಿಸಲು ಅಲ್ಪಸಂಖ್ಯಾತರು ಎಲ್ಲೆಡೆ ಹೊಂದಾಣಿಕೆ ಮಾಡಬೇಕಾಗಿದೆ.

**ಭದ್ರತೆಯ ಸಮಸ್ಯೆ:** ಬಹುಸಂಖ್ಯಾತರೊಂದಿಗೆ ಸಮಾಜದ ಬೆಳವಣಿಗೆಯಾಗುವಾಗ ಅಲ್ಪಸಂಖ್ಯಾತರ ಆಸ್ತಿ, ಜೀವನ ಹಾಗೂ ಅಭಿವೃದ್ಧಿಯ ಅಭದ್ರತೆಯಿಂದ ಕೂಡಿರುತ್ತದೆ.

ಸಮಾನತೆಗೆ ಸಂಬಂಧಿಸಿದ ಸಮಸ್ಯೆ: ಸಮಾನತೆಯ ದೃಷ್ಟಿಯಿಂದ ನೋಡುವುದಾದರೂ ಸಹ ಅಲ್ಪಸಂಖ್ಯಾತರಿಗೆ ಎಲ್ಲೆಡೆ ಬೇದ-ಭಾವ ಮಾಡುತ್ತಾರೆ, ಅವಕಾಶಗಳಿಂದ ಅಲ್ಪಸಂಖ್ಯಾತರು ವಂಚಿತರಾಗುತ್ತಾರೆ.

ಆದ್ದರಿಂದ ಅಲ್ಪಸಂಖ್ಯಾತರ ಕಲ್ಯಾಣವಾಗಬೇಕಾಗಿದೆ, ದೋಷಪೂರಿತ ಆರ್ಥಿಕ ನೀತಿಗಳು ಗುರಿಸಾಧಿಸದ ಆರ್ಥಿಕ ಯೋಜನೆಗಳು, ಅದಕ್ಷ ಆಡಳಿತ, ವಿಕೇಂದ್ರೀಕರಣದ ಅಭಾವ, ಕೋಮುಸಂಘಟನೆಗಳಿಂದ ಅಲ್ಪಸಂಖ್ಯಾತರ ಕಲ್ಯಾಣವಾಗಬೇಕಾಗಿದೆ. ಈ ಅಲ್ಪಸಂಖ್ಯಾತರ ಸಮಸ್ಯೆಗಳಿಗೆ ಸರಕಾರ ವಿವಿಧ ಕಾರ್ಯಕ್ರಮಗಳನ್ನು ಮಾಡುತ್ತಾ ಬಂದಿದೆ. ಇದರೊಂದಿಗೆ ಸರ್ಕಾರೇತರ ಸಂಘಸಂಸ್ಥೆಗಳು ಅವರ ಏಳಿಗೆಗಾಗಿ ದುಡಿಯುತ್ತಿವೆ.

**ಅಲ್ಪಸಂಖ್ಯಾತರ ಏಳಿಗೆಗೆ ಸರ್ಕಾರೇತರ ಸಂಘಟನೆಗಳ ಪಾತ್ರ**

ಸರ್ಕಾರೇತರ ಸಂಘಸಂಸ್ಥೆಗಳು ಅಲ್ಪಸಂಖ್ಯಾತರ ಏಳಿಗೆಗೆ ವಿವಿಧ ಕಾರ್ಯಕ್ರಮಗಳನ್ನು ಹಮ್ಮಿಕೊಂಡಿದೆ. ಶಿಕ್ಷಣ, ಮನೆಕಟ್ಟಲು ಸಾಲ, ಕೃಷಿ, ಹೈನುಗಾರಿಕೆ, ರೇಷ್ಮೆ ಕೃಷಿ, ನೀರಾವರಿ, ಹೊಲಿಗೆ ತರಬೇತಿ, ಕರಕುಶಲತೆ, ಗುಡಿಕೈಗಾರಿಕೆ, ಸಣ್ಣ ಉದ್ದಿಮೆ, ಆರೋಗ್ಯ, ಮಹಿಳಾ

ಸಬಲೀಕರಣ ಇತ್ಯಾದಿಗಳನ್ನು ಸ್ಥಳೀಯ, ರಾಷ್ಟ್ರೀಯ ಹಾಗೂ ಅಂತರರಾಷ್ಟ್ರೀಯ ಮಟ್ಟದಲ್ಲಿ ಸರ್ಕಾರೇತರ ಸಂಘಸಂಸ್ಥೆಗಳು (ಎನ್.ಜಿ.ಒ.)ಗಳು ಕೆಲಸಮಾಡುತ್ತಿವೆ.

**ಎನ್‌ಜಿಒ ಎಂದರೇನು**

ಲಾಭದ ಉದ್ದೇಶವಿಲ್ಲದೆ ಸ್ವತಂತ್ರವಾಗಿ ಕಾರ್ಯಾಚರಿಸುವ ಸಮಾನ ಮನಸ್ಸಿನ ಜನರ ಒಂದು ಸಂಘಟನೆ ಎಂದು ಕರೆಯಬಹುದು. ಇವುಗಳು ಸರ್ಕಾರದ ನೆರವು ಇಲ್ಲದೆ ಸಾಮಾಜಿಕ, ಸಾಂಸ್ಕೃತಿಕ, ಪರಿಸರ ಹಾಗೂ ಕಾನೂನಿನ ನೆರವು ನೀಡುವ ಸಂಸ್ಥೆಗಳಾಗಿವೆ. ಸರ್ಕಾರೇತರ ಸಂಘಸಂಸ್ಥೆ ೧೯೪೫ರಲ್ಲಿ ವಿಶ್ವಸಂಸ್ಥೆಯ ಶಾಸನದ ೭ನೇ ಮತ್ತು ೧೦ನೇ ವಿಧಿಯ ಪ್ರಕಾರ ಅಸ್ತಿತ್ವಕ್ಕೆ ಬಂತು. ಅಂತೆಯೇ ಈ ಸಂಸ್ಥೆಯು ಸರ್ಕಾರದ ಭಾಗವಲ್ಲದೆ ಅಥವಾ ಸರ್ಕಾರದಿಂದ ಸ್ಥಾಪಿತವಲ್ಲದ ಸಂಸ್ಥೆಯಾಗಿ ಹುಟ್ಟಿದೆ.

೨೦ನೇ ಶತಮಾನದಲ್ಲಿ ಜಾಗತೀಕರಣದ ಪ್ರಭಾವದಿಂದ ಪ್ರೇರಿತವಾದ ಸಮಾಜವು ಸರ್ಕಾರೇತರ ಸಂಘಸಂಸ್ಥೆಗೆ ಹೆಚ್ಚಿನ ಮಹತ್ವವನ್ನು ನೀಡಿತು. ದೇಶದಲ್ಲಿ ಸಮಸ್ಯೆಗಳು ರಾರಾಜಿಸುತ್ತಿರುವಾಗ ಸಮಸ್ಯೆಗಳಿಗೆ ಪರಿಹಾರ ಸಿಗದಿದ್ದಾಗ ಅಂತರರಾಷ್ಟ್ರೀಯ ನೆರವನ್ನು ಪಡೆಯುವುದು ಸಹಜ. ಅಂತೆಯೇ ಕೆಲವು ಅಂತರರಾಷ್ಟ್ರೀಯ ಒಪ್ಪಂದಗಳು ಮಾಡಿ ಅಂತರರಾಷ್ಟ್ರೀಯ ಸಮಸ್ಯೆಗಳಿಗೆ ಪರಿಹಾರ ನೀಡುತ್ತಾ ಬರುವುದು ಒಂದು ವಾಡಿಕೆ. ವಿಶ್ವವ್ಯಾಪಾರ ಸಂಸ್ಥೆ(ಡಬ್ಲ್ಯುಟಿಒ) ತನ್ನ ಇಚ್ಛೆಯನ್ನು ಬಂಡವಾಳಶಾಹಿ ರಾಷ್ಟ್ರಗಳಿಗೆ ಹೆಚ್ಚಿನ ಒಲವು ತೋರುತ್ತಾ ಬಂದಿದೆ. ಇದನ್ನು ಸದೆಬಡಿಯಲು ಸರ್ಕಾರೇತರ ಸಂಘಸಂಸ್ಥೆಗಳು ಹುಟ್ಟಿ ಮಾನವೀಯ ಸಮಸ್ಯೆಗಳು ಹಾಗೂ ಸಾಮಾಜಿಕ ಅಭಿವೃದ್ಧಿಯ ಹೊಸ ನೆಲೆಯನ್ನು ಸ್ಥಾಪಿಸಿದವು.

**ವರ್ಲ್ಡ್ ಬ್ಯಾಂಕಿನ ಪ್ರಕಾರ ಎನ್‌ಜಿಒಗಳನ್ನು ಎರಡು ರೀತಿಯಾಗಿ ವಿಂಗಡಿಸಬಹುದು.**

೧. ಕಾರ್ಯಪ್ರವೃತ್ತಿಯ ಎನ್‌ಜಿಒಗಳು

೨. ವಕಲತ್ತು ವಹಿಸುವ ಎನ್‌ಜಿಒಗಳು

ಕಾರ್ಯಪ್ರವೃತ್ತಿಯ ಎನ್‌ಜಿಒಗಳು ಪ್ರಮುಖವಾಗಿ ಅಭಿವೃದ್ದಿಯ ಕೆಲಸವನ್ನು ಮಾಡುವುದಾದರೆ ವಕಲತ್ತು ವಹಿಸುವ ಎನ್‌ಜಿಒಗಳು ಯಾವುದೇ ವಿಷಯವನ್ನು ಪ್ರೋತ್ಸಾಹಿಸುವ ಹಾಗೂ ಉತ್ತೇಜಿಸುವ ಕೆಲಸವನ್ನು ಮಾಡುತ್ತವೆ.

**ವಿವಿಧ ರೀತಿಯ ಎನ್‌ಜಿಒಗಳು**

- BINGO ಅಂತರರಾಷ್ಟ್ರೀಯ ವ್ಯವಹಾರಿಕ ಸ್ನೇಹಭಾವದ ಎನ್‌ಜಿಒ
- ENGO ಪರಿಸರ ಹಾಗೂ ವನ್ಯಜೀವಿಗಳ ಕಾಳಜಿ ವಹಿಸುವ ಎನ್‌ಜಿಒ.
- BONGO ಸರಕಾರದ ಒಂದು ರೀತಿಯ ಸಂಸ್ಥೆಯಾಗಿದ್ದು ತನ್ನ ವಿವಿಧ ಕೆಲಸವನ್ನು ಮಾಡುತ್ತದೆ.
- INGO ಅಂತರರಾಷ್ಟ್ರೀಯ ಸಂಘಸಂಸ್ಥೆ

- QUANGO ಭಾಗಶಃ ಸ್ವಾಯತ್ತತೆಯನ್ನು ಹೊಂದಿ ಈ ಎನ್‌ಜಿಒಗಳಲ್ಲಿ ಸರಕಾರದ ಕೆಲವು ಸದಸ್ಯರುಗಳಿರುತ್ತಾರೆ.
- RINGO ಅಂತರರಾಷ್ಟ್ರೀಯ ಧಾರ್ಮಿಕ ಎನ್‌ಜಿಒ
- DONGO ಅಂತರರಾಷ್ಟ್ರೀಯ ದಾನಿಗಳ ಎನ್‌ಜಿಒ

**ಎನ್‌ಜಿಒಗಳ ಕೆಲಸ ವೈಖರಿಯ ಸ್ವಭಾವ**

- ಎನ್‌ಜಿಒಗಳು ಸರಕಾರದ ಬೇರೆ ಬೇರೆ ಏಜೆನ್ಸಿಗಳ ಮುಖಾಂತರ, ಸರ್ಕಾರದ ಬೆಂಬಲ, ಹಾಗೂ ದೊಡ್ಡ ಉದ್ದಿಮೆದಾರರ ಬೆಂಬಲ ಹಾಗೂ ತನ್ನದೇ ಸದಸ್ಯರ ಬೆಂಬಲದೊಂದಿಗೆ ಯಾವುದೇ ಲಾಭ ಪಡೆಯದೇ ವಿವಿಧ ಕೆಲಸವನ್ನು ಸಮಾಜದಲ್ಲಿ ಮಾಡುತ್ತಿವೆ. ಅವರ ಕೆಲಸ ವೈಖರಿಯ ಮೇಲೆ ಒಂದು ಪಕ್ಷಿನೋಟ.
- **ಇಳಿವಯಸ್ಸಿನವರ ಆರೈಕೆ:** ಇಂದು ವೈದ್ಯಕೀಯ ಜಗತ್ತಿನಲ್ಲಿ ಆದ ಬೆಳವಣಿಗೆಯಿಂದ ಮನುಷ್ಯನ ಆಯುಷ್ಯ ಜಾಸ್ತಿಯಾಗಿದೆ. ಆದರೆ ಇಳಿವಯಸ್ಸಿನವರ ಸಮಸ್ಯೆಗಳು ಜಾಸ್ತಿಯಾಗುತ್ತಾ ಇವೆ. ಈ ಎನ್‌ಜಿಒಗಳು ಈ ಸಮಸ್ಯೆಯನ್ನು ಅರಿತು ಅವರ ಹಕ್ಕನ್ನು ಚಲಾಯಿಸಲು ಹಾಗೂ ಉತ್ತಮವಾದ ಜೀವನವನ್ನು ನಡೆಸಲು ಸಹಾಯಮಾಡುತ್ತದೆ. ಸಂಚಾರಿ ವೈದ್ಯಕೀಯ ಸೇವೆ, ವೃದ್ಧಾಶ್ರಮಗಳು, ವಯಸ್ಕರ ಶಿಕ್ಷಣ ಹಾಗೂ ಆದಾಯಭರಿತ ಯೋಜನೆಗಳನ್ನು ಇಳಿವಯಸ್ಸಿನವರಿಗೆ ರೂಪಿಸಿ ಅವರ ಜೀವನವನ್ನು ಸುಖಮಯಗೊಳಿಸುತ್ತದೆ.
- **ಕೃಷಿ ಮತ್ತು ಮೀನುಗಾರಿಕೆ:** ಇಂದು ಕೃಷಿ ಮತ್ತು ಮೀನುಗಾರಿಕೆಯಲ್ಲಿ ಉನ್ನತ ಮಟ್ಟದ ತಂತ್ರಜ್ಞಾನ ಅಳವಡಿಸಿದೆಯಾದರೂ ಸೂಕ್ತವಾದ ಮಾಹಿತಿ ಹಾಗೂ ತಿಳುವಳಿಕೆ ಇಲ್ಲದೆ ಕೃಷಿಕರು ಅವಕಾಶಗಳಿಂದ ವಂಚಿತರಾಗಿದ್ದಾರೆ. ಇಂಡಿಯನ್ ಕೌನ್ಸಿಲ್ ಆಫ್ ಅಗ್ರಿಕಲ್ಚರಲ್ ರಿಸರ್ಚ್ (ICAR) ಕೃಷಿಯಲ್ಲಿ ಸಂಶೋಧನೆ ನಡೆಸಲು ನಿರಂತರ ಉತ್ತೇಜನ ನೀಡಿದೆ. ಸ್ವಸಹಾಯ, ರೈತರ ಸಂಘ, ಸ್ಥಳೀಯ ಮಟ್ಟದಲ್ಲಿ ಬೆಳೆಯಲು ಎನ್‌ಜಿಒಗಳು ನಿರಂತರ ಕೆಲಸ ಮಾಡುತ್ತವೆ. ರೈತರ ಜಮೀನಿನ ಪೂರ್ಣ ಪ್ರಮಾಣದ ಬಳಕೆ, ಸ್ಥಳೀಯ ಸಂಪನ್ಮೂಲಗಳ ಬಳಕೆ, ಕೃಷಿ ಉತ್ಪನ್ನ ಮಾರುಕಟ್ಟೆ ಮಾಹಿತಿ, ರೈತರಿಗೆ ತರಬೇತಿ, ರೈತರ ಆರೋಗ್ಯ, ಖಾಸಗಿ ವಲಯದ ಒಡೆತನವನ್ನು ಸ್ಥಾಪಿಸಿ ಸಣ್ಣ ಉದ್ದಿಮೆಗೆ ಸಹಕಾರಿ ಎನ್‌ಜಿಒಗಳು ನೀಡುತ್ತವೆ.
- **ಮಕ್ಕಳ ಹಕ್ಕು ಮತ್ತು ಪೋಷಣೆ:** ಮಕ್ಕಳಿಗೆ ಎನ್‌ಜಿಒಗಳು ಅವರ ರಕ್ಷಣೆ ಹಾಗೂ ಜೀವಿಸುವ ಹಕ್ಕಿನಿಂದ ವಂಚಿತರಾಗದಂತೆ ನೋಡಿಕೊಳ್ಳುತ್ತಿವೆ, ಭಿಕ್ಷಾಟನೆ, ಲೈಂಗಿಕ ಕಿರುಕುಳ, ಮಕ್ಕಳ ವೇಶ್ಯಾವಾಟಿಕೆ ಹಾಗೂ ಮಾರಾಟ, ಮಕ್ಕಳ ಅಶ್ಲೀಲ ಸಾಹಿತ್ಯ, ಬಾಲಕಾರ್ಮಿಕರುಗಳಿಂದ ರಕ್ಷಿಸಿ ಅವರನ್ನು ಕಾನೂನಾತ್ಮಕವಾಗಿ ಒಳ್ಳೆಯ ಬೆಳವಣಿಗೆ ಆಗುವಂತೆ ನೋಡುತ್ತಿದೆ.
- **ಸಂಸ್ಕೃತಿ:** ಅನೇಕತೆಯಲ್ಲಿ ಏಕತೆ ಕಾಪಾಡಿಕೊಂಡು ಬಂದಿರುವ ನಮ್ಮ ದೇಶ ಸಾಂಸ್ಕೃತಿಕವಾಗಿ ಶ್ರೀಮಂತವಾಗಿ ಅದರ ಬೆಳವಣಿಗೆಗೆ ಎನ್‌ಜಿಒಗಳು ನಿರಂತರವಾಗಿ ಶ್ರಮಿಸುತ್ತಿವೆ. ಭಾರತದ

ಧ್ವಜವನ್ನು ಗೌರವಿಸುವ ಕೆಲಸ, ಜಾನಪದದ ದುರ್ಬಳಕೆಯಾಗದಂತೆ ಹಾಗೂ ಧಾರ್ಮಿಕ ಭಾವನೆಗಳಿಗೆ ಧಕ್ಕೆ ಉಂಟಾಗದಂತೆ ಸಾಮಾಜಿಕ ರಗಳೆ–ಅನಿಷ್ಟಗಳನ್ನು ಹೋಗಲಾಡಿಸಿ ಸಂಸ್ಕೃತಿಯಲ್ಲಿ ಮೆರಗನ್ನು ಶ್ರೀಮಂತಗೊಳಿಸಲು ಎನ್‌ಜಿಓಗಳು ಕೆಲಸ ಮಾಡುತ್ತವೆ.

- **ಅಂಗವಿಕಲರಿಗೆ ಸಹಾಯ:** ಅಂಗವಿಕಲರೂ ಸಹ ಸಮಾಜದ ಸದಸ್ಯರು. ಅವರನ್ನು ಸಮಾಜದ
- ಮುಖ್ಯವಾಹಿನಿಗೆ ಕರೆತಂದು ಶೋಷಣೆ, ಬೇದಭಾವ ಅವರಿಗೆ ಆಗದಂತೆ ನೋಡಿ ಕಾನೂನಿನ ನೆರವನ್ನು ಪಡೆಯಲು ಎನ್‌ಜಿಓಗಳು ಸಹಾಯ ಮಾಡುತ್ತವೆ.
- **ತುರ್ತುಸೇವೆಗಳು (ಪ್ರಕೃತಿ ವಿಕೋಪದ ಸಂದರ್ಭದಲ್ಲಿ):** ರಾಷ್ಟ್ರೀಯ ಹಾಗೂ ಸ್ಥಳೀಯ ನೈಸರ್ಗಿಕ ದುರಂತದ ಸಮಯದಲ್ಲಿ ಎನ್‌ಜಿಓಗಳು ಸರಕಾರದೊಂದಿಗೆ ಕೈಜೋಡಿಸಿ ರಕ್ಷಣೆ, ಮುಂಜಾಗ್ರತೆ, ಪ್ರಥಮ ಚಿಕಿತ್ಸೆ, ಆಹಾರ ಪದಾರ್ಥಗಳ ಸರಬರಾಜು, ಪುನರ್‌ವಸತಿ ಟೆಂಟ್‌ಗಳು, ಸ್ವಯಂಸೇವಕರ ತರಬೇತಿ ಇತ್ಯಾದಿಗಳ ಸೇವೆಯನ್ನು ಸ್ಥಳೀಯ, ರಾಷ್ಟ್ರೀಯ ಹಾಗೂ ಅಂತರರಾಷ್ಟ್ರೀಯ ಮಟ್ಟದಲ್ಲಿ ನೀಡುತ್ತಿವೆ.
- **ಪರಿಸರ ಹಾಗೂ ವನ್ಯಜೀವಿ ರಕ್ಷಣೆ:** ಮನುಷ್ಯನು ಈ ಭೂಮಿಗೆ ಹುಟ್ಟುತ್ತಿದ್ದಂತೆಯೇ ಗಾಳಿ ಮತ್ತು ಬೆಳಕಿನ ಹಕ್ಕನ್ನು ಪಡೆಯುತ್ತಾನೆ. ೧೯೮೬ರ ಪರಿಸರ ರಕ್ಷಣೆಯ ಕಾಯಿದೆಯ ಪ್ರಕಾರ, ಪರಿಸರ ಅಂದರೆ ನೀರು, ಗಾಳಿ, ಜಾಗ, ಮನುಷ್ಯ ಹಾಗೂ ಇತರ ಜೀವಿಗಳ ಸಸ್ಯರಾಶಿ, ಸೂಕ್ಷ್ಮಜೀವಿಗಳು ಹಾಗೂ ಆಸ್ತಿಗಳ ಮಧ್ಯೆ ಇರುವ ಸಂಬಂಧವನ್ನು ಪರಿಸರ ಎಂದು ಬಣ್ಣಿಸಿದೆ. ಈ ಎನ್‌ಜಿಓಗಳು ಪರಿಸರ ಹಾಗೂ ವನ್ಯಜೀವಿಗಳ ರಕ್ಷಣೆಯನ್ನು ಮಾಡುತ್ತಿವೆ.
- **ಕುಟುಂಬ ಯೋಜನೆ:** ಸ್ಥಳೀಯ ಎನ್‌ಜಿಓಗಳು ಕುಟುಂಬಗಳ ಭೇಟಿ ಮಾಡಿ ಕುಟುಂಬ ಯೋಜನೆಯ ಪ್ರಯೋಜನ ಹಾಗೂ ಪರಿಣಾಮವನ್ನು ವಿವರಿಸಿ ಕುಟುಂಬ ಯೋಜನೆ ಕೆಲಸ ಮಾಡುತ್ತಿವೆ.
- **ಆರೋಗ್ಯ:** ಆರೋಗ್ಯವೇ ಭಾಗ್ಯ ಎಂಬ ನಾಣ್ಣುಡಿಯಂತೆ ಎಲ್ಲರೂ ಆರೋಗ್ಯಭರಿತವಾಗಿ ಜೀವನ ಮಾಡಲು ವೈದ್ಯರು, ಶುಶ್ರೂಕಿಯರು, ಗುಪ್ತ ಸಮಾಲೋಚನಕಾರರಾಗಿ ಆರೋಗ್ಯ ಸೇವೆಯ ಕೆಲಸವನ್ನು ಮಾಡುತ್ತಾರೆ.
- **ಅಸಂಘಟಿತ ಕಾರ್ಮಿಕರು:** ಕಾರ್ಮಿಕರು ತಮ್ಮ ಕೆಲಸದ ಸ್ವಭಾವಕ್ಕೆ ಅನುಗುಣವಾಗಿ ಸಂಘಟನೆಗಳನ್ನು ಮಾಡಲು ಅಶಕ್ತರಾದ ಸಂದರ್ಭದಲ್ಲಿ ಅವರನ್ನು ಅಸಂಘಟಿತ ಕಾರ್ಮಿಕರೆಂದು ಕರೆಯುತ್ತೇವೆ. ಈ ಅಸಂಘಟಿತ ಕಾರ್ಮಿಕರು ತಮ್ಮ ಹಕ್ಕನ್ನು ಚಲಾಯಿಸಲು ಬಹಳ ಸಮಯದಲ್ಲಿ ವಂಚಿತರಾಗುತ್ತಾರೆ. ಈ ಎನ್‌ಜಿಓಗಳು ಶಿಕ್ಷಣ, ಆರೋಗ್ಯ ಹಾಗೂ ಉತ್ತಮವಾದ ವೇತನವನ್ನು ಅವರು ಪಡೆಯಲು ಸಹಕಾರ ನೀಡುತ್ತಾರೆ.

**ಭಾರತದಲ್ಲಿ ಎನ್‌ಜಿಒ**

ಭಾರತದಲ್ಲಿನ ೧೮ನೇಯ ಶತಮಾನದ ಕೊನೆಗೆ ಹಾಗೂ ೧೯ನೇ ಶತಮಾನದ ಮೊದಲಿಗೆ ಪರರಿಗೆ ಸಹಾಯ ಮಾಡಲು ಸಂಘಸಂಸ್ಥೆಗಳ ಉದಯವಾಯಿತು. ಆ ಕಾಲದಲ್ಲಿ ಸಾಮಾಜಿಕ ಪಿಡುಗು ಬಹಳವಾಗಿ ಚಾಲ್ತಿಯಲ್ಲಿತ್ತು. ಜಾತಿಪದ್ಧತಿ, ಅಸ್ಪೃಶ್ಯತೆ, ಬಾಲ್ಯವಿವಾಹ, ಸತಿಪದ್ಧತಿ, ಅನಕ್ಷರತೆ, ಮೂಢನಂಬಿಕೆ ಇತ್ಯಾದಿ ಇರುವಾಗ ಇದರ ವಿರುದ್ಧವಾಗಿ ಸ್ವಯಂಪ್ರೇರಿತ ಚಳುವಳಿ ಆರಂಭವಾಗಿದ್ದು ಬಹಳ ಸಂಘಸಂಸ್ಥೆಗಳ ಹುಟ್ಟಿಗೆ ಇದು ಕಾರಣವಾಯಿತು. ಗಾಂಧೀಜಿಯವರ ಪ್ರೇರಣೆಯಿಂದ ಸ್ವಯಂಸೇವಕರ ಸಂಘ ಹುಟ್ಟಿಕೊಂಡಿತು – ಸೇವಾ, ಏಕಲವ್ಯ, ದೀಶಾ ಇತ್ಯಾದಿ ಸಂಘಟನೆಗಳು ಗುಜರಾತಿನಲ್ಲಿ ಹುಟ್ಟಿಕೊಂಡವು. ಸ್ವತಂತ್ರದ ನಂತರ ಎನ್‌ಜಿಒಗಳ ಉದಯವಾಯಿತು. ಕೈಗಾರಿಕಾ ನವೀಕರಣ, ಶಿಕ್ಷಣದಲ್ಲಿ ಕ್ರಾಂತಿ, ರಾಜಕೀಯ, ಆರ್ಥಿಕ ಹಾಗೂ ಪ್ರಜಾಪ್ರಭುತ್ವದ ಅರಿವು ಹಾಗೂ ಸಮಾಜದಲ್ಲಿ ಅಸ್ತಿತ್ವದಲ್ಲಿದ್ದ ಜಾತಿಪದ್ಧತಿ, ಆರ್ಥಿಕ ಅಸಮಾನತೆ, ಲಿಂಗ ತಾರತಮ್ಯ, ಅಸ್ಪೃಶ್ಯತೆ, ಬಾಲ್ಯವಿವಾಹ, ಸತಿಪದ್ಧತಿ, ಬಾಲಕಾರ್ಮಿಕರ ಬಗ್ಗೆ ಚಳುವಳಿ ಆರಂಭಿಸಿ ಈ ಎನ್‌ಜಿಒಗಳು ತಮ್ಮ ಕೆಲಸವನ್ನು ಮಾಡಿದರು.

**ಭಾರತದಲ್ಲಿ ಎನ್‌ಜಿಒಗಳ ಕಾರ್ಯವೈಖರಿ**

ಸಂಪನ್ಮೂಲಗಳ ಸದ್ಬಳಕೆ ಹಾಗೂ ಪುನಃ ಬಳಸಬಹುದಾದ ಸಂಪನ್ಮೂಲಗಳ ಬಳಕೆಯ ಮಾಹಿತಿ, ಕುಟುಂಬ ಯೋಜನೆ, ಆರೋಗ್ಯ, ಶಿಕ್ಷಣ, ಮಳೆಕೊಯ್ಲು, ಮಣ್ಣಿನ ಸವಕಳಿಯ ರಕ್ಷಣೆ, ಸಾಮಾಜಿಕ ಶೋಷಿತ ವರ್ಗದವರ ಅಭಿವೃದ್ಧಿ, ಕನಿಷ್ಠ ಅಗತ್ಯ ವಸ್ತುಗಳ ಕಾರ್ಯಕ್ರಮ, ಪರಿಸರ ರಕ್ಷಣೆ, ಬುಡಕಟ್ಟು ಜನರ ಏಳಿಗೆಯ ಇತ್ಯಾದಿ ಕಾರ್ಯಕ್ರಮಗಳನ್ನು ಎನ್‌ಜಿಒಗಳು ಭಾರತದಲ್ಲಿ ಮಾಡುತ್ತವೆ.

**ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಕ್ರೈಸ್ತ ಅಲ್ಪಸಂಖ್ಯಾತರ ಸರ್ಕಾರೇತರ ಸಂಘಸಂಸ್ಥೆಗಳು (ಎನ್‌ಜಿಒ)**

ದಕ್ಷಿಣ ಕನ್ನಡ ಜಿಲ್ಲೆ ಕರ್ನಾಟಕ ರಾಜ್ಯದ ಕರಾವಳಿ ಭಾಗದಲ್ಲಿದ್ದು, ಮಂಗಳೂರು, ಬಂಟ್ವಾಳ, ಪುತ್ತೂರು ಹಾಗೂ ಸುಳ್ಯ ಎಂಬ ನಾಲ್ಕು ಜಿಲ್ಲೆಗಳನ್ನೊಳಗೊಂಡಿದೆ. ಶಿಕ್ಷಣದಲ್ಲಿ ಉತ್ತಮ ಸಾಧನೆ ಮಾಡಿರುವ ಈ ಜಿಲ್ಲೆಗಳು ಇತರ ಜಿಲ್ಲೆಗಳಿಗೆ ತುಲನೆ ಮಾಡುವಾಗ ದಕ್ಷಿಣಕನ್ನಡ ಜಿಲ್ಲೆಯ ಸಾಕ್ಷ್ಯರತೆ ಜಾಸ್ತಿ ಇದೆ. ಈ ಜಿಲ್ಲೆಯಲ್ಲಿ ಧಾರ್ಮಿಕ ಕ್ರೈಸ್ತ ಅಲ್ಪಸಂಖ್ಯಾತರ ಸಂಘಸಂಸ್ಥೆಗಳು–ಶಿಕ್ಷಣ ಸಂಸ್ಥೆಗಳು, ಅನಾಥಾಶ್ರಮಗಳು, ಆಸ್ಪತ್ರೆಗಳು, ದಾವಾಖಾನೆಗಳು, ಸಮಾಜಸೇವಾ ಕೇಂದ್ರಗಳು ಹಾಗೂ ಸರ್ಕಾರೇತರ ಸಂಘಸಂಸ್ಥೆಗಳು ಹೆಚ್ಚಿನ ಪ್ರಮಾಣದಲ್ಲಿ ಕಾರ್ಯನಿರ್ವಹಿಸುತ್ತದೆ.

ದಕ್ಷಿಣ ಕನ್ನಡ ಜಿಲ್ಲೆಯ ಧಾರ್ಮಿಕ ಕ್ರೈಸ್ತ ಅಲ್ಪಸಂಖ್ಯಾತರ ಸರ್ಕಾರೇತರ ಸಂಘಸಂಸ್ಥೆಗಳಾದ ಕಪುಜಿನ್ ಕೃಷಿ ಸೇವಾ ಕೇಂದ್ರ – ಉಜಿರೆ, ಪ್ರಜ್ಞಾ ಕೌನ್ಸಿಲಿಂಗ್ ಕೇಂದ್ರ–ಕಂಕನಾಡಿ, ಮಾಂಡ್ ಸೊಭಾನ್ –ಶಕ್ತಿನಗರ, ಕೊಂಕಣಿ ಲಾಂಗ್ವೆಜ್ ಆಂಡ್ ಕಲ್ಚರಲ್ ಫೌಂಡೇಶನ್ – ಶಕ್ತಿನಗರ, ಫಾದರ್ ಮುಲ್ಲರ್ ಚಾರಿಟೇಬಲ್ ಇನ್‌ಸ್ಟಿಟ್ಯೂಷನ್ – ಕಂಕನಾಡಿ, ಧರ್ಮಜ್ಯೋತಿ ಸಂಸ್ಥೆ – ವಾಮಂಜೂರು, 'ಕೆನರಾ ಅಭಿವೃದ್ಧಿ ಹಾಗೂ ಶಾಂತಿ ಸಂಸ್ಥೆ' – ನಂತೂರು ಇತ್ಯಾದಿಗಳು ಪ್ರಮುಖವಾಗಿವೆ.

### ೧.೨ ಅಧ್ಯಯನದ ಸಮಸ್ಯೆ :

ಸಂವಿಧಾನಾತ್ಮಕವಾಗಿ ಭಾರತದಲ್ಲಿ ಕ್ರೈಸ್ತ ಸಮುದಾಯದವರನ್ನು ಧಾರ್ಮಿಕ ಅಲ್ಪಸಂಖ್ಯಾತರೆಂದು ಎಂದು ಕರೆಯುತ್ತಾರೆ. ೨೦೧೧ರ ಜನಗಣತಿಯಂತೆ ಕ್ರೈಸ್ತ ಸಮುದಾಯದ ಜನಸಂಖ್ಯೆ ೧೧.೪೩ ಲಕ್ಷವಾಗಿರುತ್ತದೆ. ಭಾರತದ ಸಂವಿಧಾನದ ೧೫(೪) ಮತ್ತು ೧೬(೪) ರ ವಿಧಿಯಂತೆ ೩ (ಬಿ) ವರ್ಗಕ್ಕೆ ಸೇರಿಸಿ ಶಿಕ್ಷಣ, ಉದ್ಯೋಗ, ಮೀಸಲಾತಿ ಹಾಗೂ ಸಾಮಾಜಿಕ, ಆರ್ಥಿಕ ಅಭಿವೃದ್ಧಿಗೆ ಸಹಾಯವಾಗುವಂತೆ ಮಾಡಿದೆ. ಮಂಗಳೂರು ಮಹಾನಗರ ಪಾಲಿಕೆಯ ೨೦೧೧ ರ ಜನಗಣತಿಯಂತೆ ೬೫,೬೮೫ ಜನಸಂಖ್ಯೆ ಮಂಗಳೂರು ಮಹಾನಗರ ವ್ಯಾಪ್ತಿಯಲ್ಲಿದೆ. ಇದು ಒಟ್ಟು ಜನಸಂಖ್ಯೆಯ ೧೩.೧೫ ರಷ್ಟಿದೆ. ಕ್ರೈಸ್ತರಲ್ಲಿ ಕಥೋಲಿಕ್ ಕ್ರೈಸ್ತರು ಆಡಳಿತಾತ್ಮಕವಾಗಿ ಒಂದು ಉತ್ತಮ ಸಮುದಾಯವಾಗಿದ್ದು ಚರ್ಚಿನ ಸ್ಥಳೀಯ ಹಾಗೂ ವಲಯ ಮಟ್ಟದಲ್ಲಿ ಮತ್ತು ಡಯಾಸೀಸ್ ಮಟ್ಟದಲ್ಲಿ ಸಮುದಾಯದ ಏಳಿಗೆಗೋಸ್ಕರ ಆರ್ಥಿಕ, ಶೈಕ್ಷಣಿಕ, ಸಾಮಾಜಿಕ ಮತ್ತು ಸಾಂಸ್ಕೃತಿಕ ವಿವಿಧ ಕಾರ್ಯಕ್ರಮಗಳು ನಡೆಯುತ್ತಿವೆ.

ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಕಥೋಲಿಕ್ ಕ್ರೈಸ್ತರು ಶಿಕ್ಷಣ ಕ್ಷೇತ್ರಕ್ಕೆ ನೀಡಿದ ಕೊಡುಗೆ ಗಮನಾರ್ಹವಾಗಿದ್ದು, ದಕ್ಷಿಣಕನ್ನಡ ಜಿಲ್ಲೆಯಲ್ಲಿ ಕಥೋಲಿಕ್ ಕೈಸ್ತ ಸಮುದಾಯದ–ಶಾಲೆಗಳು – ಕಾಲೇಜುಗಳಿದ್ದು ಸಮುದಾಯದ ಜನರಿಗೆ ಉನ್ನತ ಶಿಕ್ಷಣ ನೀಡುತ್ತಿವೆ. ಅಲ್ಲದೆ ಚರ್ಚಿನ ಸ್ಥಳೀಯ ಹಾಗೂ ಡಯಾಸೀಸ್ ಮಟ್ಟದಲ್ಲಿ ಶಿಕ್ಷಣಕ್ಕೆ ಮಹತ್ವ ನೀಡಿದ್ದು ಡಯಾಸಿಸ್‌ನ ಅಂಗಸಂಸ್ಥೆಯಾದ ಕೆನರಾ ಅಭಿವೃದ್ಧಿ ಮತ್ತು ಶಾಂತಿ ಸಂಸ್ಥೆ(ಸಿಒಡಿಪಿ) ವಿದ್ಯಾರ್ಥಿ ಸಾಲವನ್ನು ವಿವಿಧ ಹಂತದಲ್ಲಿ ನೀಡುತ್ತಿದೆ. ಚರ್ಚುಗಳು ಮತ್ತು ಇತರ ಸಮುದಾಯಕ್ಕೆ ಸಂಬಂಧಪಟ್ಟ ಸರ್ಕಾರೇತರ ಸಂಸ್ಥೆಗಳು ಕ್ರೈಸ್ತರ ಶೈಕ್ಷಣಿಕ ಪ್ರಗತಿಗೆ ಶ್ರಮಿಸುತ್ತಿದ್ದು ಕ್ರೈಸ್ತರಲ್ಲಿ ಅನಕ್ಷರತೆ ನಿರುದ್ಯೋಗ, ಪ್ರಾಥಮಿಕ ಹಾಗೂ ಪ್ರೌಢಶಾಲೆಗಳ ಹಂತದಲ್ಲಿ ಶಿಕ್ಷಣವನ್ನು ಮೊಟಕುಗೊಳಿಸುವುದನ್ನು ಕಂಡುಬರುತ್ತದೆ.

ಹಾಗೆಯೇ ಬಡಕುಟುಂಬಗಳ ಅನೇಕ ವಿದ್ಯಾರ್ಥಿಗಳು ಸಿಒಡಿಪಿಯ ಸಂಸ್ಥೆಗಳಾದಂತಹ ಸಾಲ ಸೌಲಭ್ಯವನ್ನು ಪಡೆದುಕೊಂಡು ಉನ್ನತ ಶಿಕ್ಷಣವನ್ನು ಪಡೆದು ಆರ್ಥಿಕವಾಗಿ ಸಫಲರಾಗಿದ್ದಾರೆ. ಹಾಗಾದರೆ ಈ ವಿದ್ಯಾರ್ಥಿ ಸಾಲ ಯೋಜನೆಯ ಬಗ್ಗೆ ಸಮೂದಾಯದ ಎಲ್ಲಾ ಜನರಿಗೂ ತಿಳಿದಿದೆಯೇ? ಎನ್ನುವ ಪ್ರಶ್ನೆ ಮೂಡುತ್ತದೆ. ಈಗಾಗಲೇ ಸವಲತ್ತುಗಳನ್ನು ಪಡೆದುಕೊಂಡ ಫಲಾನುಭವಿಗಳಿಗೆ ಈ ಸಂಸ್ಥೆ ಮತ್ತು ಯೋಜನೆಯ ಬಗ್ಗೆ ಇರುವ ಅಭಿಪ್ರಾಯವನ್ನು ಈ ಅಧ್ಯಯನದಲ್ಲಿ ತಿಳಿದುಕೊಳ್ಳಲಾಗುವುದು.

ಫಲಾನುಭವಿಗಳು ಸಾಲ ಸೌಲಭ್ಯವನ್ನು ಪಡೆಯಲು ಅನುಕೂಲವಾದಂತಹ ಅಂಶಗಳು ಮತ್ತು ಅನಾನುಕೂಲತೆಯ ಬಗ್ಗೆ ಅಧ್ಯಯನ ನಡೆಸಬೇಕಾಗಿದೆ.

ಬೇರೆ ಬೇರೆ ಸಹಕಾರಿ ಬ್ಯಾಂಕ್, ರಾಷ್ಟ್ರೀಕೃತ ಬ್ಯಾಂಕ್‌ಗಳಲ್ಲಿ ವಿದ್ಯಾರ್ಥಿ ಸಾಲ ಯೋಜನೆಯ ನೆರವು ದೊರೆಯುತ್ತಿದ್ದು ಸಿಒಡಿಪಿಯ ಸಾಲ ಯೋಜನೆಯನ್ನು ಯಾವ ಕಾರಣಕ್ಕೋಸ್ಕರ ವಿದ್ಯಾರ್ಥಿಗಳು ಪಡೆದುಕೊಂಡಿದ್ದಾರೆ. ಇತರ ಸಾಂಸ್ಥಿಕ ಸಂಸ್ಥೆಗಳ ಹಣಕಾಸಿನ ಸಾಲ ಯೋಜನೆಗಳಿಗಿಂತ ಸಿಒಡಿಪಿಯ ವಿದ್ಯಾರ್ಥಿ ಸಾಲ ಯೋಜನೆ ಹೇಗೆ ಭಿನ್ನವಾಗಿದೆ? ಇವುಗಳ ಬಗ್ಗೆ ಈ ಅಧ್ಯಯನದಲ್ಲಿ ಚರ್ಚಿಸಲಾಗುವುದು.

### ೧.೩ ಅಧ್ಯಯನದ ಮಹತ್ವ

ಸಮಾಜ ಮತ್ತು ಶಿಕ್ಷಣ ಜೊತೆ ಜೊತೆಗೇ ಸಾಗಿದರೆ ಪ್ರಗತಿ ಸಾಧ್ಯ. ಶಿಕ್ಷಣವನ್ನು ಸಾಮಾಜಿಕ ಆಯಾಮಗಳಲ್ಲಿ ಅಭ್ಯಸಿಸುವ ಅಭಿಪ್ರಾಯವನ್ನು ಮೊತ್ತಮೊದಲಿಗೆ ಪ್ರತಿಪಾದಿಸಿದವರು ಅಮೇರಿಕಾದ ಸಮಾಜಶಾಸ್ತ್ರಜ್ಞ ಎಫ್. ವಾರ್ಡ್. ಶೈಕ್ಷಣಿಕ ಸಮಾಜಶಾಸ್ತ್ರವು ಶಿಕ್ಷಣ ಮತ್ತು ಸಮಾಜದ ಒಟ್ಟುಗೂಡುವಿಕೆ, ವಸ್ತು, ವಿಷಯ, ಕ್ರಿಯೆ, ವಿಧಾನ, ಪಠ್ಯ ಮೌಲ್ಯ ಮಾಪನ ಮುಖಾಂತರ ಸಾಮಾಜಿಕ ತತ್ವವನ್ನು ಅಳವಡಿಸಿ ಸಾಮಾಜಿಕ ಪ್ರಕ್ರಿಯೆಯನ್ನು ವೈಜ್ಞಾನಿಕಗೊಳಿಸುತ್ತದೆ ಎಂದು ಜೆ. ಜೆ. ಬ್ರೌನ್ ಹೇಳುತ್ತಾರೆ. ಖಂಡಿತವಾಗಿಯೂ ಶಿಕ್ಷಣವನ್ನು ಕೇವಲ ಜ್ಞಾನಾತ್ಮಕ ಶಾಖೆಗೆ ಸಂಕುಚಿಸದೆ ಸಮಾಜದ ಅಗತ್ಯತೆಯನ್ನು ಪೂರೈಸುವ (ಸಮಸ್ಯೆ ಪರಿಹಾರ) ರಚನಾತ್ಮಕ ಶಾಸ್ತ್ರವನ್ನಾಗಿಸುವ ಕೆಲಸ ಮಾಡುತ್ತಿವೆ.

ಶಿಕ್ಷಣ ಅಭಿವೃದ್ಧಿಗೆ ಪೂರಕವಾಗಿ ಶಿಕ್ಷಣವು ಮಾನವನ ಬುದ್ಧಿ ಕೌಶಲ್ಯ, ನೈಪುಣ್ಯತೆ, ಕಾರ್ಯದಕ್ಷತೆ ಮತ್ತು ಉತ್ಪಾದಕತೆಯನ್ನು ಹೆಚ್ಚಿಸುವ ಮೂಲಕ ಅಭಿವೃದ್ಧಿಗೆ ಪೂರಕವಾಗಿದೆ (ಅಮಿತ್ ಆಳ್ವ). ಖಂಡಿತವಾಗಿಯೂ ಶಿಕ್ಷಣ ಪಡೆದವರು ಆರ್ಥಿಕ ಅಗತ್ಯಗಳನ್ನು ಮನಗಂಡು ಆರ್ಥಿಕ ಅಭಿವೃದ್ಧಿಯಲ್ಲಿ ನೇರವಾಗಿ ಪಾಲ್ಗೊಳ್ಳುತ್ತಾರೆ. ಶಿಕ್ಷಣವು ಅಭಿವೃದ್ಧಿಯ ಪ್ರಾಣವಾಯು ಇದ್ದಂತೆ ಎಂದು ಹೇಳಬಹುದು.

ಸಾಮಾಜಿಕ ಸುಧಾರಣೆಗಳು ಶಿಕ್ಷಣದಿಂದ ಆಗುತ್ತಿದ್ದು, ಶಿಕ್ಷಣವು ಹಳೆಯ ಕಾಲದ ಜನರ ರಕ್ತಗತ ನ್ಯೂನ್ಯತೆಗಳನ್ನು ಹೋಗಲಾಡಿಸಿ ಯುವಪೀಳಿಗೆಗೆ ಹೊಸ ಚೈತನ್ಯ ತುಂಬುವ ಕೆಲಸ ಮಾಡುತ್ತಿದೆ ಎನ್ನುತ್ತಾರೆ ಡಾ। ಎನ್. ಕೆ. ಚಿದಾನಂದ ಸೊರಬ. ಯಾಕೆಂದರೆ ಶಿಕ್ಷಣವು ಬಂಧುತ್ವ ಸಾಮಾಜಿಕ ಸ್ತರೀಕರಣ, ರಾಜಕೀಯ ಒಕ್ಕೂಟದ ತಿಳುವಳಿಕೆ ನೀಡಿ ಮಾನವ ಮತ್ತು ಸಮಾಜದ ನಡುವೆ ಮಧ್ಯವರ್ತಿಯಾಗಿ ಕೆಲಸ ಮಾಡುತ್ತಿದೆ. ಆದ್ದರಿಂದ ಶಿಕ್ಷಣದಿಂದ ಸಾಮಾಜಿಕ ಅಭಿವೃದ್ಧಿ ಸಾಧ್ಯ. ಈ ಅಭಿವೃದ್ಧಿಯಾಗಲು ಸರ್ಕಾರ ಹಾಗೂ ಸರ್ಕಾರೇತರ ಸಂಘಸಂಸ್ಥೆಗಳು ಕೆಲಸ ಮಾಡುತ್ತವೆ.

ಸಿಒಡಿಪಿಯ ವಿದ್ಯಾರ್ಥಿ ಸಾಲ ಯೋಜನೆ ಸಾಮಾಜಿಕ ಅಭಿವೃದ್ಧಿಯಲ್ಲಿ ಕೆಲಸ ಮಾಡುತ್ತಿದೆ. ಸಾಮಾಜಿಕ ಸಾಮರಸ್ಯ ಶಿಕ್ಷಣದಲ್ಲಿ ಸಕ್ರಿಯಾತ್ಮಕವಾಗಿ ಕಾರ್ಯನಿರ್ವಹಿಸುತ್ತಿದೆ. ಸಿಒಡಿಪಿಯು ಸಾಮಾಜಿಕ ಅಭಿವೃದ್ಧಿಯಲ್ಲಿ ಶಿಕ್ಷಣಕ್ಕೆ ಒತ್ತು ನೀಡಿ ಶಿಕ್ಷಣದಿಂದ ಸ್ಥಳೀಯ ಸಮುದಾಯಕ್ಕೆ ಸಾಮಾಜಿಕ, ಆರ್ಥಿಕ, ರಾಜಕೀಯ, ಸಾಂಸ್ಕೃತಿಕವಾಗಿ ಮೇಲೆ ಬರಲು ಪ್ರೋತ್ಸಾಹವನ್ನು ನೀಡುತ್ತಿದೆ.

ಸಮಾಜಶಾಸ್ತ್ರದ ಸಂಶೋಧಕರು ಶಿಕ್ಷಣವನ್ನು ಸಾಮಾಜಿಕ ನ್ಯೂನ್ಯತೆಯನ್ನು ಸರಿಪಡಿಸಲು ಸಾಧ್ಯವಿದೆಯೆಂದು ನಂಬಿದ್ದಾರೆ. ಸಾಮಾಜಿಕ ಸಂಘ ಸಂಘಟನೆಗಳು ಮಾನವನ ಶರೀರದ ಅವಯುವಗಳಷ್ಟೇ ಪ್ರಮುಖ ಎಂದು ಹೇಳಿದ್ದಾರೆ. ಸಮಾಜದ ಪ್ರಮುಖ ಅವಯುವಗಳು ಚೆನ್ನಾಗಿದ್ದರೆ ಮಾನವನ ದೇಹವು ಚೆನ್ನಾಗಿರುತ್ತದೆ. ಇದನ್ನು ಅರಿತ ಸಿಒಡಿಪಿಯು ಒಂದು ಸರ್ಕಾರೇತರ ಸಂಘ ಸಂಸ್ಥೆಯಾಗಿ ದಕ್ಷಿಣಕನ್ನಡ ಜಿಲ್ಲೆಯ ಕ್ರೈಸ್ತಿಯನ್ ಸಮುದಾಯದವರ ಶಿಕ್ಷಣಕ್ಕೆ ಪ್ರೋತ್ಸಾಹ ನೀಡಿ ಅವರ ಉನ್ನತಿಯನ್ನು ಸಾಧಿಸುವಲ್ಲಿ ಕೆಲಸ ಮಾಡುತ್ತಿವೆ. ಆದರೆ ಇಂದು ಎಷ್ಟರ

ಮಟ್ಟಿಗೆ ಸಾಧನೆ ಮಾಡಿದೆ ಹಾಗೂ ಈ ಸಿಒಡಿಪಿಯ ಯೋಜನೆಗಳನ್ನು ಜನಪ್ರಿಯಗೊಳಿಸಲು ಯಾವ ಅಂಶ ಇನ್ನೂ ಹುಡುಕಬಹುದಾಗಿದೆ ಮತ್ತು ಈ ನ್ಯೂನ್ಯತೆಗಳನ್ನು ಸರಿಪಡಿಸಲು ಬೇರೆ ಮಾರ್ಗೋಪಾಯಗಳು ಇದೆಯಾ ಎಂದು ಈ ಅಧ್ಯಯನ ಮಾಡುವುದು ಬಹಳ ಮಹತ್ವದ್ದಾಗಿದೆ.

### ೧.೪ ಉದ್ದೇಶಗಳು

೧. 'ಕೆನರಾ ಅಭಿವೃದ್ಧಿ ಮತ್ತು ಶಾಂತಿ ಸಂಸ್ಥೆ'ಯ ಕಾರ್ಯಕ್ರಮಗಳ ವಿಶ್ಲೇಷಣೆ

೨. ಸಾಲಸೌಲಭ್ಯ ಯೋಜನೆಯಲ್ಲಿ ಸಿಒಡಿಪಿಯ ಸಾಧನೆಗಳ ಅಧ್ಯಯನ

೩. ಸಿಒಡಿಪಿಯ ವಿದ್ಯಾರ್ಥಿ ಸಾಲ ಯೋಜನೆಯಲ್ಲಿರುವ ಒಳಿತು-ಕೆಡುಕುಗಳನ್ನು ಚರ್ಚಿಸುವುದು.

### ೧.೫ ಅಧ್ಯಯನದ ಮಿತಿಗಳು

ಸಾಮಾಜಿಕ ಅಭಿವೃದ್ಧಿಯಲ್ಲಿ ಕೆನರಾ ಅಭಿವೃದ್ಧಿ ಮತ್ತು ಶಾಂತಿ ಸಂಸ್ಥೆಯ ಪಾತ್ರ, ವಿದ್ಯಾರ್ಥಿ ಸಾಲ ಯೋಜನೆಯ ಅಧ್ಯಯನದಿಂದ ಫಲಿತಗಳು ಕೇವಲ 'ಕೆನರಾ ಅಭಿವೃದ್ಧಿ ಮತ್ತು ಶಾಂತಿ ಸಂಸ್ಥೆ'ಗೆ ಸಂಬಂಧಪಟ್ಟದ್ದಾಗಿರುತ್ತದೆ. ಈ ಸಂಸ್ಥೆ ದಕ್ಷಿಣ ಕನ್ನಡ ಜಿಲ್ಲೆಯ ಕ್ರೈಸ್ತ ಸಮೂದಾಯದ ಸರ್ಕಾರೇತರ ಸಂಸ್ಥೆಯಾಗಿದ್ದು, ಈ ಸಮುದಾಯದ ಇತರ ಸಂಸ್ಥೆಗಳಿಗೆ ತಮ್ಮ ಸಮಸ್ಯೆಗಳನ್ನು ಬಗೆಹರಿಸುವಲ್ಲಿ ನೇರವಾದ ಉತ್ತರ ನೀಡದಿರಬಹುದು. ಆದರೂ, ವಿದ್ಯಾರ್ಥಿ ಸಾಲ ಯೋಜನೆಯನ್ನು ನಡೆಸುತ್ತಿರುವ ಇತರ ಎನ್‌ಜಿಒಗಳೂ ಈ ಅಧ್ಯಯನವನ್ನು ಬಳಸಬಹುದಾಗಿದೆ.

### ೧.೬ ಅಧ್ಯಯನದ ವಿಧಾನಗಳು

ಈ ಅಧ್ಯಯನವು ಕ್ಷೇತ್ರ ಆಧರಿತ ಅಧ್ಯಯನವಾಗಿದೆ. ಸಾಮಾಜಿಕ ಅಭಿವೃದ್ಧಿಯಲ್ಲಿ 'ಕೆನರಾ ಅಭಿವೃದ್ಧಿ ಮತ್ತು ಶಾಂತಿ ಸಂಸ್ಥೆ'. ವಿದ್ಯಾರ್ಥಿ ಸಾಲ ಯೋಜನೆಯ ಅಧ್ಯಯನ ಕೈಗೊಂಡಿರುವಾಗ ಪ್ರಥಮ ಮಾಹಿತಿಯನ್ನು ಸಿಒಡಿಪಿಯ ನಿರ್ದೇಶಕರು ಹಾಗೂ ಸಿಬ್ಬಂದಿ ವರ್ಗ ಹಾಗೂ ಫಲಾನುಭವಿಗಳನ್ನು ಸಂದರ್ಶಿಸಿ ಮಾಹಿತಿಯನ್ನು ಪಡೆದುಕೊಳ್ಳಲಾಗುವುದು. ಈ ಮಾಹಿತಿಯನ್ನು ಪಡೆಯಲು ಪ್ರಶ್ನಾವಳಿಯನ್ನು ತಯಾರಿಸಿ, ಮಾಹಿತಿದಾರರಿಂದ ಮಾಹಿತಿಯನ್ನು ಪಡಕೊಳ್ಳಲಾಗುವುದು.

ಅನುಷಂಗಿಕ ಮಾಹಿತಿಯನ್ನು ಸಂಸ್ಥೆಯ ಗ್ರಂಥಾಲಯದಿಂದ, ವಾರ್ಷಿಕ ಸಂಚಿಕೆ, ಅಂತರ್-ಜಾಲತಾಣಗಳು, ವಿವಿಧ ವರದಿಗಳು, ನಿಯತಕಾಲಿಕೆಗಳು ಸ್ಥಳೀಯ ಚರ್ಚ್ ಮಟ್ಟದಲ್ಲಿನ ಪುಸ್ತಕಗಳಿಂದ ಮಾಹಿತಿಯನ್ನು ಸಂಗ್ರಹಿಸಲಾಗುವುದು. ಪ್ರಾಥಮಿಕ ಹಾಗೂ ದ್ವಿತೀಯ ಮೂಲಗಳಿಂದ ಸಂಗ್ರಹಿಸಿದ ವರದಿಗಳನ್ನು ಕ್ರೋಢೀಕರಿಸಿ ಸರಾಸರಿ ಶೇಕಡಾವಾರು ಕ್ರಮವನ್ನು ಅನುಸರಿಸಿ ವಿಶ್ಲೇಷಿಸಲಾಗುವುದು.

### ೧.೭ ಅಧ್ಯಾಯಗಳ ಮಾಹಿತಿ

ಸಾಮಾಜಿಕ ಅಭಿವೃದ್ಧಿಯಲ್ಲಿ 'ಕೆನರಾ ಅಭಿವೃದ್ಧಿ ಮತ್ತು ಶಾಂತಿ ಸಂಸ್ಥೆ'. ವಿದ್ಯಾರ್ಥಿ ಸಾಲ ಯೋಜನೆಯ ಅಧ್ಯಯನದಲ್ಲಿ ೪ ಅಧ್ಯಯನಗಳಾಗಿ ವಿಂಗಡಿಸಲಾಗಿದೆ.

- **ಅಧ್ಯಾಯ ೧ – ಪೀಠಿಕೆ**

ಈ ಅಧ್ಯಾಯದಲ್ಲಿ ಅಲ್ಪಸಂಖ್ಯಾತರ ಸಮಸ್ಯೆ ಮತ್ತು ಅಭಿವೃದ್ಧಿ, ಅಲ್ಪಸಂಖ್ಯಾತರ ಏಳಿಗೆಗೆ ಸರ್ಕಾರೇತರ ಸಂಘ ಸಂಸ್ಥೆಗಳ ಪಾತ್ರ, ಸರ್ಕಾರೇತರ ಸಂಘಸಂಸ್ಥೆಗಳ ಅರ್ಥ ಮತ್ತು ವ್ಯಾಖ್ಯೆ, ಅವುಗಳ ಕೆಲಸದ ಕಾರ್ಯವೈಖರಿಯನ್ನು ಚರ್ಚಿಸಿದೆ ಹಾಗೂ ಭಾರತದಲ್ಲಿ ಸರ್ಕಾರೇತರ ಸಂಸ್ಥೆಗಳ ಬಗ್ಗೆ ಚರ್ಚಿಸಿ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಕ್ರೈಸ್ತ ಅಲ್ಪಸಂಖ್ಯಾತರ ಬಗ್ಗೆ ಮಾಹಿತಿಯನ್ನು ಈ ಅಧ್ಯಾಯವು ಹೊಂದಿರುತ್ತದೆ.

ಅಧ್ಯಯನದ ಸಮಸ್ಯೆಯನ್ನು ವಿವರಿಸಿ ಅಧ್ಯಯನದ ಮಹತ್ವವನ್ನು ಹಾಗೂ ಉದ್ದೇಶವನ್ನು ವಿವರಿಸಿ ಈ ಅಧ್ಯಯನದ ಮಿತಿಗಳು ಮತ್ತು ವಿಧಾನಗಳನ್ನು ಈ ಅಧ್ಯಾಯ ಹೊಂದಿರುತ್ತದೆ.

- **ಅಧ್ಯಾಯ ೨ – ಅಧ್ಯಯನ ಸಂಸ್ಥೆಯ ಪರಿಚಯ ಮತ್ತು ಸಾಹಿತ್ಯ ಸಮೀಕ್ಷೆ**

ಈ ಅಧ್ಯಾಯದಲ್ಲಿ ಸಂಸ್ಥೆಯ ಕಿರುಪರಿಚಯ, ನಕ್ಷೆ, ಚರಿತ್ರೆ ಆಡಳಿತ ವ್ಯವಸ್ಥೆ, ಸಂಸ್ಥೆಯ ದೃಷ್ಟಿಸೂಚಿ, ಸಂಸ್ಥೆಯ ಧ್ಯೇಯೋಕ್ತಿ, ಸಂಸ್ಥೆಯ ಚಟುವಟಿಕೆಗಳನ್ನು ವಿವರಿಸಿ ವಿದ್ಯಾರ್ಥಿ ಸಾಲ ಯೋಜನೆಯ ಬಗ್ಗೆ ವಿವರಿಸಲಾಗುವುದು. ವಿದ್ಯಾರ್ಥಿ ಸಾಲ ಯೋಜನೆಯ ಉದ್ದೇಶ, ಬಂಡವಾಳ, ನಿಯಮ ಹಾಗೂ ಸರ್ಕಾರದ ನಿಯಮಗಳನ್ನು ಈ ಅಧ್ಯಾಯದಲ್ಲಿ ಒಳಗೊಂಡಿರುತ್ತದೆ.

- **ಅಧ್ಯಾಯ ೩ – ಅಂಕಿ ಅಂಶಗಳ ವಿಶ್ಲೇಷಣೆ**

ಪ್ರಥಮ ಮಾಹಿತಿಗಳಿಂದ ಪಡೆದ ಮಾಹಿತಿಯನ್ನು ವಿಶ್ಲೇಷಿಸಿ ವಿಶ್ಲೇಷಣಾತ್ಮಕ ವಿವರಣೆಯನ್ನು ಈ ಅಧ್ಯಾಯವು ಒಳಗೊಂಡಿರುತ್ತದೆ.

ಈ ಅಧ್ಯಾಯದಲ್ಲಿ ಪ್ರಥಮ ಹಂತದಲ್ಲಿ "ಕೆನರಾ ಅಭಿವೃದ್ಧಿ ಮತ್ತು ಶಾಂತಿ ಸಂಸ್ಥೆ"ಯ ಕಾರ್ಯಕ್ರಮವನ್ನು ವಿಶ್ಲೇಷಿಸಲಾಗುವುದು. ದ್ವಿತೀಯ ಹಂತದಲ್ಲಿ ಸಾಲ ಯೋಜನೆಯಲ್ಲಿ ಸಿಒಡಿಪಿಯ ಸಾಧನೆಗಳ ಬಗ್ಗೆ ಅಧ್ಯಯನ ನಡೆಸಿ ವಿಶ್ಲೇಷಿಸಲಾಗುವುದು ಹಾಗೂ ತೃತೀಯ ಹಂತದಲ್ಲಿ ಸಿಒಡಿಪಿಯ ವಿದ್ಯಾರ್ಥಿ ಸಾಲ ಯೋಜನೆಯ ಒಳಿತು–ಕೆಡುಕುಗಳನ್ನು ಚರ್ಚಿಸಲಾಗುವುದು.

- **ಅಧ್ಯಾಯ ೪ – ಫಲಿತಗಳು, ಸಲಹೆಗಳು ಮತ್ತು ಸಮಾರೋಪ**

ಈ ಅಧ್ಯಾಯದಲ್ಲಿ ಪಡಕೊಂಡ ಫಲಿತಗಳನ್ನು ವಿಶ್ಲೇಷಿಸಿ ಸಂಸ್ಥೆಗೆ ಸಲಹೆಗಳನ್ನು ನೀಡಿ ಸಮಾರೋಪ ಸಾರಾಂಶವನ್ನು ನೀಡಲಾಗುವುದು.

# ಅಧ್ಯಾಯ - ೨

## ಅಧ್ಯಯನ ಸಂಸ್ಥೆಯ ಪರಿಚಯ ಮತ್ತು ಸಾಹಿತ್ಯ ಸಮೀಕ್ಷೆ

### ೨.೧ ಪ್ರವೇಶ

ಇಂದು ವಿವಿಧ ರೀತಿಯ ಸಾಲಗಳು ಆಕರ್ಷಣೆಯ ದರದಲ್ಲಿ ಸಿಗುತ್ತವೆ. ವಿದ್ಯಾರ್ಥಿಗಳಿಗೆ ಸಾಲಸೌಲಭ್ಯವನ್ನು ಜಾತಿ-ಸಂಘಟನೆಗಳು, ರಾಜಕೀಯ ಪಕ್ಷಗಳ ಬೆಂಬಲಿತ ಸಂಸ್ಥೆಗಳು, ಸಾಮಾಜಿಕ ಸಂಸ್ಥೆಗಳು ಅಲ್ಲದೆ ಬ್ಯಾಂಕುಗಳು ವಿದ್ಯಾರ್ಥಿಗಳನ್ನು ಆರ್ಕರ್ಷಿಸುತ್ತಿವೆ. ಕ್ರಿಶ್ಚಿಯನ್ ಸಮುದಾಯದ ಧಾರ್ಮಿಕ ಅಲ್ಪಸಂಖ್ಯಾತ ಎನ್‌ಜಿಓ "ಕೆನರಾ ಅಭಿವೃದ್ಧಿ ಮತ್ತು ಶಾಂತಿ ಸಂಸ್ಥೆ" ಕ್ರಿಶ್ಚಿಯನ್ ಸಮುದಾಯದವರ ಶಿಕ್ಷಣದ ಏಳಿಗೆಗೋಸ್ಕರ ವಿದ್ಯಾರ್ಥಿ ಸಾಲವನ್ನು ನೀಡುತ್ತಿದೆ. ಈ ಸಂಸ್ಥೆಯ ಕಿರುಪರಿಚಯವನ್ನು ಈ ಅಧ್ಯಯನವು ಒಳಗೊಂಡಿರುತ್ತದೆ.

### ೨.೨. ಕೆನರಾ ಅಭಿವೃದ್ಧಿ ಮತ್ತು ಶಾಂತಿ ಸಂಸ್ಥೆಯ ಚರಿತ್ರೆ

ಕರ್ನಾಟಕದಲ್ಲಿ ಮಂಗಳೂರಿನ ಕಥೋಲಿಕ್ ಕ್ರಿಶ್ಚಿಯನ್‌ನವರಿಗೆ ತನ್ನದೇ ಆದ ಚರಿತ್ರೆ ಇದೆ. ಮಂಗಳೂರಿನಲ್ಲಿ ಕ್ರಿಶ್ಚಿಯನ್ನರು ಅಭಿವೃದ್ಧಿ ಕಾಮಗಾರಿಕೆಗೆ ಹೆಸರುವಾಸಿಯಾಗಿದ್ದಾರೆ, ಶಿಕ್ಷಣ, ಗುಡಿಕೈಗಾರಿಕೆ, ಕೃಷಿ, ಹೈನುಗಾರಿಕೆ, ಹಂಚು ಕಾರ್ಖಾನೆ, ಮಾರುಕಟ್ಟೆ ವಿಚಾರದಲ್ಲಿಯೂ ಸಹ ತನ್ನದೇ ಆದ ಕೊಡುಗೆಯನ್ನು ನೀಡಿದ್ದಾರೆ. ೧೭ನೇ ಶತಮಾನದಲ್ಲಿ ಈ ಭಾಗದಲ್ಲಿ ಕ್ರಿಶ್ಚಿಯನ್ ಮಿಶನರಿಗಳು ಅಭಿವೃದ್ಧಿ ಕಾರ್ಯದಲ್ಲಿ ತೊಡಗಿದರು. ಆದರೆ ಒಂದು ವ್ಯವಸ್ಥಿತ ರೀತಿಯ ಅಭಿವೃದ್ಧಿ ಕಾರ್ಯಗಳು ನಡೆಯಲಿಲ್ಲ. ಅವರು ವೈಯಕ್ತಿಕ ಸೇವಾಮನೋಭಾವದಿಂದ ಅಲ್ಲಲ್ಲಿ ಕೆಲವು ಕಾರ್ಯಕ್ರಮಗಳನ್ನು ಮಾಡಿದರು. ಕಥೋಲಿಕ್ ಸಮುದಾಯದ ಬಿಷಪ್‌ರ ಮಾರ್ಗದರ್ಶನದಲ್ಲಿ ವ್ಯವಸ್ಥಿತವಾಗಿ ಸಾಮಾಜಿಕ-ಆರ್ಥಿಕ ಪ್ರಗತಿಯನ್ನು ಅಭಿವೃದ್ಧಿಪಡಿಸಲು ೧೯೬೦ ರಲ್ಲಿ ಮಂಗಳೂರಲ್ಲಿ ಒಂದು ಸಂಸ್ಥೆಯನ್ನು ಸ್ಥಾಪಿಸಲಾಯಿತು. ಈ ಸಂಸ್ಥೆಯನ್ನು ಕಾರಿತಾಸ್ ಅಥವಾ ಕ್ಯಾಥೋಲಿಕ್ ಚಾರಿಟೀಸ್-ಮಂಗಳೂರು ಎಂದು ಕರೆಯಲಾಯಿತು. ವಿವಿಧ ಸಮಸ್ಯೆಗಳಿಗೆ ಪರಿಹಾರ ನೀಡುವ ಸಂಸ್ಥೆಯಾಗಿ ಹೆಸರುವಾಸಿಯಾಯಿತು. ದಿಕ್ಕಿಲ್ಲದವರಿಗೆ, ಅನಾಥರಿಗೆ ಹಾಗೂ ಬಡ ರೈತರಿಗೆ ಹೊರದೇಶದಿಂದ ಆಹಾರ ಹಾಗೂ ಆಹಾರ ಸಾಮಗ್ರಿಗಳನ್ನು ತಂದು ಹಂಚುತ್ತಿದ್ದರು. ನೆರೆಬರಗಳ ಸಮಯದಲ್ಲಿ, ವಿವಿಧ ಕಾರ್ಯಕ್ರಮಗಳನ್ನು ನಡೆಸಿ ಸಮಾರೋಪ ಹಾದಿಯ ಕೆಲಸವನ್ನು ಈ ಸಂಸ್ಥೆ ಮಾಡುತ್ತಿತ್ತು. "ಹಸಿದವರಿಗೆ ಆಹಾರ" ಎಂಬ ಮಾತಿನಂತೆ ವಸತಿ ಹಾಗೂ ಬಟ್ಟೆಬರೆಗಳ ಜೊತೆಗೆ ಗೋಧಿ, ಬಲ್ಗರ್, ಹಾಲಿನ ಪುಡಿ, ಎಣ್ಣೆ ಹಾಗೂ ಹಣದ ಸಹಾಯವನ್ನೂ ನೀಡುತ್ತಿದ್ದರು. ಆದರೆ ಈ ರೀತಿಯ ಕೆಲಸಗಳು ಜನರ ಸಮಸ್ಯೆ, ದಾರಿದ್ರ್ಯತೆಯನ್ನು ಕಮ್ಮಿ ಮಾಡುವುದಿಲ್ಲ ಬದಲಾಗಿ ಹೆಚ್ಚುತ್ತಲೇ ಹೋಗುತ್ತದೆ ಎಂದು ಸಂಸ್ಥೆಯು ಮನಗಂಡ ನಂತರ ಸಾಮಾಜಿಕ ಹಾಗೂ ಆರ್ಥಿಕವಾಗಿ ಜನರು ಅಭಿವೃದ್ಧಿಯಾಗುವಂತೆ ವಿವಿಧ ಕಾರ್ಯಕ್ರಮಗಳನ್ನು ರೂಪಿಸಿತು. ಅಂತೆಯೇ, "ಕೆನರಾ ಅಭಿವೃದ್ಧಿ ಮತ್ತು ಶಾಂತಿ ಸಂಸ್ಥೆ" ಈ ಎಲ್ಲಾ ಕೆಲಸಗಳನ್ನು ಮಾಡಲು ೧೯೭೪ ರಲ್ಲಿ ಅಸ್ತಿತ್ವಕ್ಕೆ ಬಂತು. ಈ ಸಂಸ್ಥೆಯು ೧೯೬೦ ರ ಮೈಸೂರು ಸೊಸೈಟಿ ರೆಗ್ಯುಲೇಶನ್ ಆಕ್ಟ್ ಪ್ರಕಾರ

೧೯೭೪ ಎಪ್ರಿಲ್ ತಿಂಗಳ ೧೬ ರಂದು ನೊಂದಾಯಿಸಲ್ಪಟ್ಟಿತು. ಪ್ರಸ್ತುತ ಮಂಗಳೂರಿನ ನಂತೂರ್ ಎಂಬಲ್ಲಿ ತನ್ನ ಸ್ವಂತ ಸುಸಜ್ಜಿತ ಕಟ್ಟಡದಲ್ಲಿ ತನ್ನ ಕೆಲಸವನ್ನು ನಿರ್ವಹಿಸುತ್ತಿದೆ.

**೨.೩. ಸಿಒಡಿಪಿಯ ಆಡಳಿತ ವ್ಯವಸ್ಥೆ**

ಸರ್ಕಾರೇತರ ಸಂಸ್ಥೆ ಸಿಒಡಿಪಿಯು ಒಂದು ವ್ಯವಸ್ಥಿತ ಆಡಳಿತ ವ್ಯವಸ್ಥೆಯನ್ನು ಹೊಂದಿದೆ. ಆಡಳಿತ ಮಂಡಳಿಯ ಅಧ್ಯಕ್ಷರು ಮಂಗಳೂರು ಧರ್ಮಪ್ರಾಂತ್ಯದ ಧರ್ಮಾಧ್ಯಕ್ಷರು ಆಗಿರುತ್ತಾರೆ. ಕಾರ್ಯದರ್ಶಿ ಮತ್ತು ಕೋಶಾಧಿಕಾರಿವಿದ್ದು ಚುನಾಯಿತ ನಿರ್ದೇಶಕರು ಈ ಸಂಸ್ಥೆಯ ಆಡಳಿತವನ್ನು ಮಾಡುತ್ತಾರೆ.

**ಆಡಳಿತ ಮಂಡಳಿ**




**ಪ್ರಸ್ತುತ ಆಡಳಿತ ಮಂಡಳಿಯ ಸದಸ್ಯರು**

೧. ಅ। ವಂ। ಡಾ। ಎಲೋಶಿಯಸ್ ಫೌಲ್ ಡಿಸೋಜ – ಅಧ್ಯಕ್ಷರು

೨. ವಂ। ಮೋ। ಡೆನ್ನಿಸ್ ಮೋರಸ್ ಪ್ರಭು – ಉಪಾಧ್ಯಕ್ಷರು

೩. ವಂ। ಓಸ್ವಲ್ಡ್ ಮೊಂತೆರೊ – ಕಾರ್ಯದರ್ಶಿ

೪. ಸಿ। ಎಫ್ಲಿನ್ ಬೆನ್ನಿಸ್ – ಕೋಶಾಧಿಕಾರಿ

೫. ಶ್ರೀ ಜೆ. ಆರ್. ಲೋಬೊ – ಸದಸ್ಯರು

೬. ಶ್ರೀ ಫ್ರಾನ್ಸಿಸ್ ಡಿ'ಕುನ್ಹಾ – ಸದಸ್ಯರು

೭. ಶ್ರೀಮತಿ ಐರಿನ್ ರೆಬೆಲ್ಲೊ – ಸದಸ್ಯರು

೮. ಸಿ। ಮಿಶೆಲ್ ಬಿ.ಎಸ್. – ಸದಸ್ಯರು

೯. ಡಾ। ಐರಿನ್ ವೇಗಸ್ – ಸದಸ್ಯರು

೧೦. ಡಾ। ಲವೀನಾ ಲೋಬೊ – ಸದಸ್ಯರು

೧೧. ಎಸ್. ಡಬ್ಲ್ಯೂ ಪಿಂಟೊ – ಸದಸ್ಯರು

೧೨. ಮೊ। ಎಡ್ವಿನ್ ಪಿಂಟೊ – ಸದಸ್ಯರು

ಸಂಸ್ಥೆಯ ಆಡಳಿತ ಮಂಡಳಿ ಮುಂಗಡ ಪತ್ರ ಹಾಗೂ ಲೆಕ್ಕಾಚಾರಗಳನ್ನು ಬಗ್ಗೆ ನಿಗಾ ವಹಿಸಿ ವಿವಿಧ ಯೋಜನೆಗಳನ್ನು ರೂಪಿಸಿ ಕಾಲ–ಕಾಲಕ್ಕೆ ಸರಕಾರದಿಂದ ಬರುವ ಯೋಜನೆಗಳನ್ನು ಪಾಲಿಸುತ್ತದೆ. ಈ ಸಂಸ್ಥೆಯಲ್ಲಿ ಸುಮಾರು ೪೦ ಮಂದಿ ಉದ್ಯೋಗಿಗಳಿದ್ದು ತನ್ನ ಕಾರ್ಯಕ್ರಮಗಳನ್ನು ಸಕಾಲದಲ್ಲಿ ಕಾರ್ಯಗತಗೊಳಿಸಲು ವಿವಿಧ ರೀತಿಯ ಕಾರ್ಯಕರ್ತರನ್ನು ಹೊಂದಿದ್ದು, ಅವರಿಗೆ ಸರಕಾರ ನಿಗದಿಪಡಿಸಿದ ವೇತನ, ಪಿಂಚಣಿ, ಇ.ಎಸ್.ಐ. ಹಾಗೂ ಕ್ಯಾಂಟೀನ್ ಸವಲತ್ತುಗಳನ್ನು ಆಡಳಿತ ಮಂಡಳಿ ನೀಡಿದೆ.

**೨.೪. ಸಂಸ್ಥೆಯ ದೃಷ್ಟಿಸೂಚಿ**

ಮಾನವನು ಸ್ವತಃ ತನ್ನ, ನೆರೆಕರೆಯವರ, ದೇವರ ಹಾಗೂ ಪರಿಸರದ ಜೊತೆಯಲ್ಲಿ ಘನತೆಯಿಂದ ಬಾಳಿ ಶಾಂತಿ, ಪ್ರೀತಿ, ಸೌಹಾರ್ದ ಹಾಗೂ ನ್ಯಾಯಭರಿತ ಸಮಾಜವನ್ನು ರೂಪಿಸುವುದು.

**೨.೫. ಸಂಸ್ಥೆಯ ಧ್ಯೇಯೋಕ್ತಿ**

ಸಬಲೀಕರಣ ಕ್ರಿಯೆ ಹಾಗೂ ಸುಸ್ಥಿರ ಪರಿಸರವನ್ನು ಪ್ರೋತ್ಸಾಹಿಸುವ ಮೂಲಕ ಸಮಾಜದ ಹಾಗೂ ಅವಕಾಶ ವಂಚಿತ ವರ್ಗದವರ ಘನತೆಯನ್ನು ಮರು ಸ್ಥಾಪಿಸುವುದು.

**೨.೬ ಸಂಸ್ಥೆಯ ಅಂಗಸಂಸ್ಥೆಗಳು**

"ಕೆನರಾ ಅಭಿವೃದ್ಧಿ ಮತ್ತು ಶಾಂತಿ ಸಂಸ್ಥೆ" ತನ್ನ ಉದ್ದೇಶ ಈಡೇರಿಸಲು ಹಾಗೂ ಸುಲಲಿತವಾಗಿ ಕೆಲಸ ಕಾರ್ಯಗಳನ್ನು ನಿರ್ವಹಿಸಲು ನಾಲ್ಕು ಸಂಸ್ಥೆಗಳನ್ನು ಹೊಂದಿದ್ದು ತನ್ನ ಕೆಲಸ ಕಾರ್ಯಗಳನ್ನು ಈ ಸಂಸ್ಥೆ ಮುಖಾಂತರ ಮಾಡುತ್ತಿವೆ. ಆ ಸಂಸ್ಥೆಗಳ ಕಿರುಪರಿಚಯ ಈ ಕೆಳಕಂಡಂತಿವೆ.

- **ಸಂತ ಜೋಸೆಫ್ ಕೃಷಿ ಶಾಲೆ, ವಾಮಂಜೂರು (೧೯೭೮–೨೦೦೨)**

೧೯೭೮ರಲ್ಲಿ ಕೃಷಿಕರನ್ನು ತರಬೇತಿಗೊಳಿಸುವ ಉದ್ದೇಶದಿಂದ ವಾಮಂಜೂರಿನಲ್ಲಿ ಸ್ಥಾಪಿತವಾಯಿತು. ಅಲ್ಪ ಅವಧಿಯ ಹಾಗೂ ದೀರ್ಘ ಅವಧಿಯ ವಿವಿಧ ತರಬೇತಿಗಳನ್ನು ಈ ಸಂಸ್ಥೆ ಮಾಡುತ್ತಿತ್ತು. ಯುವಜನರಲ್ಲಿ ರೈತರ ಶೋಷಣೆಯ ವಿರುದ್ಧ ಹೋರಾಡಲು ಉತ್ತೇಜನ ನೀಡುತ್ತಿತ್ತು. ಇದು ಸುಮಾರು ೧೦೦೦ಕ್ಕಿಂತ ಹೆಚ್ಚು ಯುವ ರೈತರು ವೈಜ್ಞಾನಿಕ ಹಾಗೂ ತಾಂತ್ರಿಕ ಕೃಷಿ ವಿಧಾನಗಳನ್ನು ಉಪಯೋಗಿಸಿ ಸ್ವಂತ ಉದ್ಯೋಗವನ್ನು ಮಾಡಲು ಸಿಒಡಿಪಿಯು ಸಹಾಯ ಮಾಡಿದೆ. ಹೈನುಗಾರಿಕೆ, ಕೋಳಿ ಸಾಕಣಿಕೆ, ಮಳೆ ಕೊಯ್ಲು, ಕೃಷಿ ಯಂತ್ರಗಳ ರಿಪೇರಿ ಹಾಗೂ ತರಬೇತಿ ಈ ಸಂಸ್ಥೆಯು ನೀಡುತ್ತಿದ್ದು, ೨೦೦೨ ರಲ್ಲಿ ಆಡಳಿತಾತ್ಮಕ ಕಾರಣಗಳಿಂದ ಸಂಸ್ಥೆಯನ್ನು ಮುಚ್ಚಿದೆ.

- **ರುಸೆಂಪ್ ಕಮ್ಯುನಿಟಿ ಕಾಲೇಜು**

೧೯೮೨ ರಲ್ಲಿ ಮಂಗಳೂರು ತಾಲೂಕಿನ ಪಕ್ಷಿಕೆರೆಯಲ್ಲಿ ಗ್ರಾಮೀಣ ಶಾಲೆ ಬಿಟ್ಟ ಬಡ ಯುವಜನರಿಗೆ ಬೇರೆ ಬೇರೆ ವೃತ್ತಿಯಲ್ಲಿ ತರಬೇತಿ ನೀಡಿ ಅವರು ಸ್ವ ಅವಲಂಬಿಯಾಗುವಂತೆ ಅವಕಾಶ ಮಾಡಿಕೊಟ್ಟಿದೆ. ಈಗಾಗಲೇ ೨೭೦೦ ರಷ್ಟು ಯುವಜನರು ಎಲೆಕ್ಟ್ರಿಶನ್, ಅಲ್ಯುಮಿನಿಯಂ ಫ್ಯಾಬ್ರಿಕೇಶನ್, ವೆಲ್ಡರ್, ಟೈಲರ್, ದ್ವಿಚಕ್ರ ದುರಸ್ಥಿ ಹಾಗೂ ಇತರ ವೃತ್ತಿಯನ್ನು ಪಡೆದು ಉದ್ಯೋಗ ಅಥವಾ ಸ್ವ ಉದ್ಯೋಗ ಮಾಡುತ್ತಿದ್ದಾರೆ.

- **ಫಾ. ಎಲ್.ಎಮ್. ಪಿಂಟೋ ಆಸ್ಪತ್ರೆ**

ಬೆಳ್ತಂಗಡಿ ತಾಲೂಕಿನ ಬದ್ಯಾರು ಎಂಬಲ್ಲಿ ಗ್ರಾಮೀಣ ಪ್ರದೇಶದ ಜನರಿಗೆ ಉತ್ತಮ ಆರೋಗ್ಯ ಸೇವೆಯನ್ನು ಒದಗಿಸುವ ನಿಟ್ಟಿನಲ್ಲಿ ಫಾ.ಎಲ್.ಎಮ್.ಪಿಂಟೋ ಆಸ್ಪತ್ರೆಯನ್ನು ಸ್ಥಾಪಿಸಲಾಗಿದೆ. ಬೆಥನಿ

ಧರ್ಮ ಬಗಿನಿಯರು ಈ ಸಂಸ್ಥೆಯ ಮೇಲುಸ್ತುವಾರಿಯನ್ನು ನೋಡುತ್ತಿದ್ದಾರೆ. ತುರ್ತುಚಿಕಿತ್ಸೆ, ಸ್ತ್ರೀರೋಗ, ಹೆರಿಗೆ, ಮಕ್ಕಳ ಚಿಕಿತ್ಸೆ ಹಾಗೂ ಉತ್ತಮ ಲ್ಯಾಬ್ ಹೊಂದಿದೆ. ನುರಿತ ತಜ್ಞರು ಈ ಆಸ್ಪತ್ರೆಗೆ ಭೇಟಿ ನೀಡುತ್ತಿದ್ದು, ೬೦ ಹಾಸಿಗೆಯನ್ನು ಈ ಆಸ್ಪತ್ರೆ ಹೊಂದಿದೆ.

- **ಸಾಮಾಜಿಕ ತರಬೇತಿ ಸಂಸ್ಥೆ :** ಈ ಸಂಸ್ಥೆಯು ನಂತೂರಲ್ಲಿದ್ದು ವಿವಿಧ ವೃತ್ತಿಪರ ತರಬೇತಿಗಳನ್ನು ನೀಡುತ್ತಿದೆ.

**೨.೭. ಸಂಸ್ಥೆಯ ಉದ್ದೇಶಗಳು**

- ಮಹಿಳೆಯರ ಸ್ವಾವಲಂಬನೆ, ಘನತೆ, ನ್ಯಾಯ ಮತ್ತು ಸ್ವಸಮಾನತೆಯ ಜೀವನದ ಜೊತೆಗೆ ಅವರನ್ನು ಸಾಮಾಜಿಕ, ಆರ್ಥಿಕ, ರಾಜಕೀಯ, ಸಾಂಸ್ಕೃತಿಕ, ಧಾರ್ಮಿಕವಾಗಿ ಸಶಕ್ತರನ್ನಾಗಿಸುವುದು.
- ಗ್ರಾಮೀಣ ನಿರುದ್ಯೋಗಿ ಯುವಕರನ್ನು ಗುರುತಿಸಿ ಅವರಿಗೆ ಸ್ವ ಉದ್ಯೋಗವನ್ನು ಮಾಡಲು ತರಬೇತಿ ನೀಡಿ ಪ್ರೋತ್ಸಾಹಿಸುವುದು.
- ಸಮುದಾಯದ ಜನರ ಆರೊಗ್ಯವನ್ನು ಕಾಪಾಡಲು ಆರೋಗ್ಯ ಮಾಹಿತಿಯನ್ನು ಒದಗಿಸುವುದು.
- ಮಕ್ಕಳಿಗೆ ಉನ್ನತ ಶಿಕ್ಷಣ ಹಾಗೂ ವೃತ್ತಿ ಶಿಕ್ಷಣದ ಕುರಿತಾಗಿ ಪ್ರೋತ್ಸಾಹಿಸುವುದು.
- ಸುತ್ತಮುತ್ತಲಿನ ಪರಿಸರವನ್ನು ರಕ್ಷಿಸಲು ಪ್ರೋತ್ಸಾಹಿಸುವುದು.
- ಗೃಹ ಕಾರ್ಮಿಕರ ಹಕ್ಕುಗಳನ್ನು ಕಾಪಾಡುವಲ್ಲಿ ಪ್ರೋತ್ಸಾಹಿಸುವುದು.
- ಜನರಲ್ಲಿ ಜಾತಿ ಮತ ಧರ್ಮಗಳ ಭಿನ್ನಾಭಿಪ್ರಾಯವನ್ನು ಹೋಗಲಾಡಿಸಿ ಶಾಂತಿ ಸೌಹಾರ್ದವನ್ನು ಕಾಪಾಡುವುದು.

## ೨.೮. ಸಂಸ್ಥೆಯ ತತ್ವಗಳು

- ದೇವರು ಪ್ರತಿಯೊಬ್ಬರನ್ನೂ ತನ್ನ ಸ್ವರೂಪದಲ್ಲಿ ಸೃಷ್ಟಿಸಿದ್ದಾನೆ. ಸಿಒಡಿಪಿಯು ಪ್ರತಿಯೊಬ್ಬ ಮನುಷ್ಯನ ಮೌಲ್ಯ ಮತ್ತು ಸಾಮರ್ಥ್ಯವನ್ನು ಗುರುತಿಸಿ ಅದನ್ನು ವೃದ್ಧಿಪಡಿಸಲು ಸಹಾಯ ಮಾಡುತ್ತದೆ.
- ಜ್ಞಾನವು ಒಂದು ಶಕ್ತಿ. ಯಾವುದೇ ಅಡೆತಡೆ ಇಲ್ಲದೆ ಈ ಶಕ್ತಿಯನ್ನು ತಮ್ಮದಾಗಿಸಲು ನಿರಂತರ ಶಿಕ್ಷಣದಿಂದ ಸಾಧ್ಯ.
- ಮನುಷ್ಯನು ಸಾಮಾಜಿಕ ಜೀವಿ. ಗುಂಪಿನೊಂದಿಗೆ ಬೇರೆ ಜನರೊಂದಿಗೆ ಸ್ಪಂದಿಸಿ ಜನರ ಸಂಘಟಣೆಯನ್ನು ರೂಪಿಸಲು ಸಿಒಡಿಪಿಯು ಸಹಾಯ ಮಾಡುತ್ತದೆ.
- ಜನರ ಸಂಘಟಣೆಗಳು ಜನರ ಶಕ್ತಿಯನ್ನು ತೋರಿಸುತ್ತದೆ. ಈ ಶಕ್ತಿಯನ್ನು ಆರ್ಥಿಕತೆಯಿಂದ ಬಲಪಡಿಸಬೇಕು.
- ಅಂತೆಯೇ, ಪ್ರತಿಯೊಬ್ಬರೂ ತಮ್ಮ ಸಾಮರ್ಥ್ಯವನ್ನು ಅರ್ಥಮಾಡಿಕೊಂಡು ಎಲ್ಲರೂ ಯಥೇಚ್ಚವಾಗಿ ತಮ್ಮ ಕೆಲಸದ ಫಲವನ್ನು ತೆಗೆದು ಸಹಬಾಳ್ವೆ ಮತ್ತು ತೃಪ್ತಿದಾಯಕ ಜೀವನವನ್ನು ನಡೆಸುವುದು.

## ೨.೯. ಸಿಒಡಿಪಿ ಯ ಕಾರ್ಯಯೋಜನೆಗಳ ಕಾರ್ಯಶೈಲಿ

- **ಮೂಲಭೂತ ಸೌಕರ್ಯ ಯೋಜನೆ**

  ಈ ಯೋಜನೆಯಡಿಯಲ್ಲಿ ಸಿಒಡಿಪಿಯು ಬಡವರಿಗೆ ಮನೆಕಟ್ಟಲು, ಮನೆ ದುರಸ್ತಿ ಮಾಡಲು, ನವೀಕರಿಸಲು ಸಹಾಯ ಮಾಡುತ್ತದೆ. ಅಲ್ಲದೆ, ಶಾಲಾ ಕಟ್ಟಡ, ಆಸ್ಪತ್ರೆ, ಅನಾಥಾಶ್ರಮಗಳು, ಚರ್ಚುಗಳು, ಕಾನ್ವೆಂಟ್‌ಗಳ ಮೂಲಸೌಕರ್ಯವನ್ನು ವೃದ್ಧಿಸಲು ಸಹಾಯ ಮಾಡುತ್ತದೆ.

- **ಅನಾನುಕೂಲತೆಯುಳ್ಳವರಿಗೆ ನೆರವು**

  ಕಷ್ಟದಿಂದ ಬಳಲುತ್ತಿದ್ದ ಅಂಗವಿಕಲರಿಗೆ, ನಿರ್ಗತಿಕರಿಗೆ, ಮಹಿಳೆಯರಿಗೆ, ಮಕ್ಕಳಿಗೆ ತಮ್ಮ ಬದುಕನ್ನು ಸಾಗಿಸಲು ಒದಗಿಸಲಾಗುತ್ತದೆ. ಅಲ್ಲದೆ, ಮಕ್ಕಳಿಗೆ ಶಿಕ್ಷಣಕ್ಕೆ ನೆರವನ್ನು ನೀಡಿ ಮಕ್ಕಳ ಪುನರ್‌ವಸತಿ ಕಾರ್ಯಕ್ರಮವನ್ನು ಮಾಡಲಾಗುತ್ತದೆ. ಕುಡಿತದ ಚಟ ಉಳ್ಳವರಿಗೆ ಕುಡಿತದಿಂದ ದೂರವಿರಲು ಮದ್ಯವ್ಯಸನ ಕಾರ್ಯಕ್ರಮಗಳು, ಬಡ ಹೆಣ್ಣುಮಕ್ಕಳಿಗೆ ಮದುವೆಗೆ ನೆರವು ಸಿಒಡಿಪಿ ಮಾಡುತ್ತಿದೆ.

- **ಸಂಘಟನೆ ಮತ್ತು ಸ್ವಸಹಾಯ**

  ಈ ಯೋಜನೆಯಲ್ಲಿ ದಲಿತರ ಕಲ್ಯಾಣ, ಮಹಿಳೆ ಹಾಗೂ ಮಕ್ಕಳ ಅಭಿವೃದ್ಧಿ, ಗೃಹಕಾರ್ಮಿಕರ ಕಲ್ಯಾಣ ಕಾರ್ಯಕ್ರಮಗಳು ಒಳಗೊಂಡಿರುತ್ತವೆ.

- **ನಿರ್ದಿಷ್ಟ ಕೌಸಲ್ಯಗಳ ತರಬೇತಿ**

  ಗ್ರಾಮೀಣ ಸ್ವ ಉದ್ಯಮ ಕೇಂದ್ರ ಹಾಗೂ ಕೃಷಿ ಶಾಲೆಗಳಲ್ಲಿ ರುಸೆಂಪ್ ಕಮ್ಯೂನಿಟಿ ಕಾಲೇಜಿನಲ್ಲಿ ವಿವಿಧ ರೀತಿಯ ತರಬೇತಿಯನ್ನು ನೀಡಲಾಗುವುದು.

- **ಆಸ್ತಿ ಯೋಜನೆಗಳು**

  ಮನೆಕಟ್ಟುವ ಯೋಜನೆ, ಉನ್ನತ ಶಿಕ್ಷಣಕ್ಕೆ ನೆರವು, ಅಲ್ಲವೇ ಬೇರೆ ಅದಾಯ ತರುವ ಯೋಜನೆಗಳು ಸಿಒಡಿಪಿಯು ಹಮ್ಮಿಕೊಂಡಿದೆ.

- **ಶಿಬಿರಾ ಮತ್ತು ರ್‍ಯಾಲಿಗಳು**

  ಮಾನವ ಹಕ್ಕುಗಳಿಗೆ ಧಕ್ಕೆ ಬಂದಾಗ ಮತ್ತು ಅನೀತಿಯ ವಿರುದ್ಧ, ದೀನದಲಿತರ ಶೋಚನೀಯ ಪರಿಸ್ಥಿತಿಯ ವಿರುದ್ಧ ರ್‍ಯಾಲಿಗಳನ್ನು ಮಾಡಿ ಸರಕಾರದ ಗಮನವನ್ನು ಸೆಳೆಯುವ ಕೆಲಸವನ್ನು ಮಾಡುತ್ತವೆ.

- **ತರಬೇತಿ ಕಾರ್ಯಯೋಜನೆ**

  ಯಾವುದೇ ಒಂದು ಯೋಜನೆಗಳು ವೈಜ್ಞಾನಿಕವಾಗಿ ಆದಾಗ ಅದರ ಫಲಿತಾಂಶ ಉನ್ನತ ಮಟ್ಟದಲ್ಲಿರುತ್ತದೆ. ಅಂತೆಯೇ ಸಿಒಡಿಪಿಯು ವಿವಿಧ ಕಾರ್ಯಕ್ರಮಗಳಿಗೆ ಕಾರ್ಯಕರ್ತರನ್ನು ತರಬೇತಿಗೊಳಿಸಿ ಅದನ್ನೇ ಅವರು ಫಲಾನುಭವಿಗೆ ನೀಡುವಂತೆ ಮಾಡಿ, ಆದರೆ ಮೇಲುಸ್ತುವಾರಿಯನ್ನು ನೋಡಿಕೊಳ್ಳುತ್ತದೆ.

- **ಸಂಪನ್ಮೂಲಗಳನ್ನು ಹೆಚ್ಚಿಸುವ ಯೋಜನೆಗಳು**

  ಬೇರೆ ಬೇರೆ ವಿಧಾನಗಳಿಂದ ಹಣದ ಕ್ರೋಢೀಕರಣವನ್ನು ಮಾಡಿ ವಿವಿಧ ಯೋಜನೆಗಳನ್ನು ಹಮ್ಮಿಕೊಳ್ಳುವುದು. ಜನರ ತಲಾಆದಾಯವನ್ನು ಹೆಚ್ಚಿಸುವಂತೆ ಮಾಡುತ್ತದೆ.

**೨.೧೦. ಪ್ರಸ್ತುತ ಸಿ.ಒ.ಡಿ.ಪಿ. ಸಂಸ್ಥೆಯ ಮುಖ್ಯ ಚಟುವಟಿಕೆಗಳು**

- **ಮಹಿಳಾ ಸಶಕ್ತತಾ ಕಾರ್ಯಕ್ರಮ**

  ಈ ಸಂಸ್ಥೆಯ ಕಾರ್ಯಕ್ರಮವನ್ನು ಕಳೆದ ೧೪ ವರ್ಷಗಳಿಂದ ಬೆಂಗಳೂರಿನ ಕ್ರಾಸ್ ಸಂಸ್ಥೆ ಸಹಯೋಗದೊಂದಿಗೆ ಮಂಗಳೂರು ಹಾಗೂ ಕಾಸರಗೋಡು ಜಿಲ್ಲೆಗಳಲ್ಲಿ ಅನುಷ್ಠಾನ ಮಾಡಲಾಗಿದೆ, ಮಹಿಳೆಯರ ಮತ್ತು ಮಕ್ಕಳ ಹಕ್ಕುಗಳ ಬಗ್ಗೆ ಜಾಗೃತಿ ಮೂಡಿಸಲಾಗಿದೆ. ಮಕ್ಕಳ ಶಿಕ್ಷಣ, ಮಹಿಳೆಯರ ಹಕ್ಕು, ಆರೋಗ್ಯ ಹಾಗೂ ಸ್ವಾವಲಂಬಿ ಯೋಜನೆಗಳ ಮುಖಾಂತರ ಅವರಲ್ಲಿ ಚೈತನ್ಯವನ್ನು ತುಂಬಿದೆ.

- **ಸಮೃದ್ಧಿ ರೂರಲ್ ಅಪ್‌ಲಿಪ್ಟ್‌ಮೆಂಟ್ ಫೌಂಡೇಶನ್**

  ಬೆಂಗಳೂರಿನ ಕ್ರಾಸ್ ಸಂಸ್ಥೆಯ ಸಹಯೋಗದಲ್ಲಿ ಸಿ.ಒ.ಡಿ.ಪಿ ಪ್ರವರ್ತಿತ ಮಹಿಳಾ ಸ್ವ –ಸಹಾಯ ಸಂಘ ಹೊಂದಿದೆ. ಇದರಲ್ಲಿ ಸುಮಾರು ೬೯೦೪ ಮಂದಿ ಸದಸ್ಯರು ಇದ್ದು

ರೂ. ೬,೯೮,೪೧,೪೩೦ ರಷ್ಟು (2016) ಕಿರು ಸಾಲ ಪಡೆದಿದ್ದಾರೆ. ಈ ಸಾಲವನ್ನು ಶೇಕಡಾ ೧೦೦ ರಷ್ಟು ಸಾಲವನ್ನು ಮರುಪಾವತಿ ಮಾಡಿದ್ದಾರೆ.

- **ಅಸಂಘಟಿತ ಕಾರ್ಮಿಕ ವರ್ಗದವರಿಗೆ ಭದ್ರತೆ**

ದಕ್ಷಿಣ ಕನ್ನಡ ಮತ್ತು ಕಾಸರಗೋಡು ಜಿಲ್ಲೆಗಳಲ್ಲಿ ಈ ಯೋಜನೆಯನ್ನು ಅನುಷ್ಠಾನಗೊಳಿಸಲಾಗಿದೆ. ಈ ಯೋಜನೆಯ ಮೂಲಕ ಅಸಂಘಟಿತ ವಲಯದ ಜನರಿಗೆ ಸಾಮಾಜಿಕ ಭದ್ರತೆಯನ್ನು ಒದಗಿಸುವುದು, ಸರಕಾರಿ ಸವಲತ್ತುಗಳ ಬಗ್ಗೆ ಮಾಹಿತಿ, ಮದುವೆ ನೋಂದಾವಣೆ ಕಾಯ್ದೆ, ಸ್ವಾವಲಂಬನೆ ಯೋಜನೆ, ಜನಶ್ರೀ ಯೋಜನೆ, ಆರ್.ಎಸ್.ಬಿ.ವೈ. ಹಾಗೂ ಇತರ ಯೋಜನೆಗಳ ಬಗ್ಗೆ ಮಾಹಿತಿ ಕೊಡುವುವುದರ ಮೂಲಕ ಜನಜಾಗ್ರತಿ ಮಾಡಲಾಗುತ್ತಿದೆ.

- **ಎಂಡೋಸಲ್ಫಾನ್ ಪೀಡಿತರನ್ನು ಸಮಾಜದ ಮುಖ್ಯವಾಹಿನಿಗೆ ತರುವುದು**

ಕಾಸರಗೋಡು ಜಿಲ್ಲೆಯ ಕುಂಬ್ಡಾಜೆ ಮತ್ತು ಎಣ್ಮಕಜೆ ಪಂಚಾಯತ್ ವ್ಯಾಪ್ತಿಯಲ್ಲಿ ಎಂಡೋಸಲ್ಫಾನ್ ಪೀಡಿತರನ್ನು ಗುರುತಿಸಿ ವಿವಿಧ ತರಬೇತಿ, ಮಾಹಿತಿಯ ಮೂಲಕ ಅವರನ್ನು ಸಮಾಜದ ಮುಖ್ಯವಾಹಿನಿಗೆ ತರುವ ಕೆಲಸವನ್ನು ಪ್ರಾರಂಭಿಸಲಾಗಿದೆ. ಅಲ್ಲದೆ ಅವರನ್ನು ಆರ್ಥಿಕವಾಗಿ ಬಲಪಡಿಸಲು ಆರೋಗ್ಯ, ಸಾವಯವ ಕೃಷಿಯ ಮಹತ್ವ, ಉಚಿತ ವೈದ್ಯಕೀಯ ತಪಾಸಣೆಯ ಕಾರ್ಯಕ್ರಮ, ಕೈತೋಟ ನಿರ್ಮಾಣ, ಸ್ವ-ಉದ್ಯೋಗ ತರಬೇತಿ ಮೂಲಕ ಮಾಹಿತಿಯನ್ನು ನೀಡಲಾಗುತ್ತದೆ.

- **ವಿದ್ಯಾಭ್ಯಾಸ**

ಸಿ.ಒ.ಡಿ.ಪಿ. ಸಂಸ್ಥೆಯು ೧೯೭೫ರಿಂದ ಬಡ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿವೇತನ ಹಾಗೂ ಪ್ರೋತ್ಸಾಹಧನದ ಅವಕಾಶ ನೀಡಿದೆ. ಈವರೆಗೆ ಪ್ರಾಥಮಿಕ ಹಾಗೂ ಪ್ರೌಢಶಾಲೆಯಲ್ಲಿ ವ್ಯಾಸಂಗ ಮಾಡುವ ಸುಮಾರು ೩೭೦೦ ಮಕ್ಕಳಿಗೆ ಪ್ರೋತ್ಸಾಹಧನ ನೀಡಿದೆ. ೨೦೦೫ ರಿಂದ ಯುವಜನರನ್ನು ಉನ್ನತ ಶಿಕ್ಷಣಕ್ಕೆ ಮತ್ತು ನಾಡಿನ ಪ್ರಮುಖ ವಾಹಿನಿಗೆ ಸೇರಲು ಪ್ರೋತ್ಸಾಹಿಸಿ ಅವರಲ್ಲಿರುವ ಪ್ರತಿಭೆ ಸಾಮರ್ಥ್ಯಗಳನ್ನು ಅಭಿವೃದ್ಧಿಸುವ ಕಾರ್ಯಕ್ರಮಗಳನ್ನು ಹಮ್ಮಿಕೊಂಡಿದೆ.

- **ಗೃಹ ಕಾರ್ಮಿಕರ ವೇದಿಕೆ**

೨೦೦೪ರಲ್ಲಿ ಸಂಘಟನೆಯ ನೊಂದಾವಣೆಯಾಗಿದ್ದು ವೇದಿಕೆಯಲ್ಲಿ ನೊಂದಾಯಿತ ಸದಸ್ಯರ ಸಂಖ್ಯೆ ಈಗ ಸುಮಾರು ೩೦೦ ರಷ್ಟಿದೆ. ಈ ವೇದಿಕೆಯಲ್ಲಿ ಪ್ರಸ್ತುತ ಗೃಹ ಕಾರ್ಮಿಕರ ೨೦ ಸ್ವ-ಸಹಾಯ ಸಂಘಗಳಿವೆ.

- **ಆರೋಗ್ಯ**

ಕಿನ್ನಿಗೋಳಿ, ಮಂಗಳೂರು ತಾಲೂಕಿನ ಕೆಮ್ರಾಲ್, ಕಿಲ್ಪಾಡಿ, ಮೆನ್ನಬೆಟ್ಟು, ಬಳ್ಕುಂಜೆ, ಐಕಳ, ಪಂಚಾಯತ್‌ಗಳಲ್ಲಿ ಹೆಚ್.ಐ.ವಿ-ಏಡ್ಸ್ ರೋಗದ ಬಗ್ಗೆ ಜಾಗೃತಿಯನ್ನು ಮೂಡಿಸಿದೆ. ಪ್ರತೀ ತಿಂಗಳು ಹೆಚ್.ಐ.ವಿ. ಸೋಂಕಿತರಿಗಾಗಿ ಸಮಾಲೋಚನಾ ಸಭೆಗಳು, ಆಹಾರಧಾನ್ಯ ಪೂರೈಕೆ,

ಕ್ಷಯರೋಗದ ಬಗ್ಗೆ ಹೆಚ್.ಐ.ವಿ. ಏಡ್ಸ್ ಬಗ್ಗೆ ಮಾಹಿತಿಯನ್ನು ನೀಡಿ ಸಮುದಾಯ ಆಧಾರಿತ ಹಾಗೂ ಕುಟುಂಬ ಆಧಾರಿತ ಬೆಂಬಲವು ಹೆಚ್.ಐ.ವಿ. ಸೋಂಕಿತರಿಗೆ ಸಿಗುವಂತೆ ಮಾಡಿದೆ.

- **ಆಹಾರ ಭದ್ರತಾ ಮತ್ತು ಸ್ವಾಭಾವಿಕ ಸಂಪನ್ಮೂಲಗಳ ಅಭಿವೃದ್ಧಿ**

ನೀರ್‌ಮಾರ್ಗ ಮತ್ತು ಅಡ್ಯಾರ್ ಪಂಚಾಯತ್‌ಗಳ ವ್ಯಾಪ್ತಿಯಲ್ಲಿ ಸಾವಯವ ಕೃಷಿ, ಜಲಾನಯನ ಯೋಜನೆಯನ್ನು ಅಂಧೇರಿ ಹಿಲ್ಫೆ, ಎಂಬ ಸಂಸ್ಥೆಯ ಸಹಕಾರದೊಂದಿಗೆ ಅನುಷ್ಠಾನಗೊಳಿಸಲಾಗುತ್ತಿದೆ.

**೨.೧೧. ಸಂಸ್ಥೆಯ ಬಂಡವಾಳ**

ಧಾರ್ಮಿಕ ಅಲ್ಪಸಂಖ್ಯಾತ ಕ್ರೈಸ್ತಿಯನ್ ಸಮುದಾಯದ ಸರ್ಕಾರೇತರ ಸಂಸ್ಥೆ ಸಿಒಡಿಪಿಗೆ ತನ್ನ ಚಟುವಟಿಕೆಗಳನ್ನು ಮಾಡಲು ಸಮುದಾಯದ ಜನರು ದೇಣಿಗೆ ನೀಡುತ್ತಾರೆ. ಅಂತೆಯೇ ಈ ಕೆಳಗಿನ ಇತರ ಎನ್‌ಜಿಒ ಹಾಗೂ ವ್ಯಕ್ತಿಗತ ದೇಣಿಗೆಗಳು ಬೇರೆ ಬೇರೆ ಯೋಜನೆಗೆ ಸಹಾಯ ನೀಡುತ್ತಿವೆ. ಈ ಕೆಳಗಿನ ಸಂಸ್ಥೆಗಳು ಸಿಒಡಿಪಿಗೆ ಹಣದ ನೆರವನ್ನು ನೀಡುತ್ತಿವೆ.

| ಕ್ರ ಸಂ | ಹೆಸರು | ಸ್ಥಳ | ಉದ್ದೇಶ |
|---|---|---|---|
| ೧. | KROSS | ಬೆಂಗಳೂರು | ಸಾಮಾಜಿಕ |
| ೨. | MS CAYETANA IRIBANEGORY | ಸ್ಪೇನ್ | ಶಿಕ್ಷಣ |
| ೩. | ಅಂದೇರಿಹಿಲ್ಫೆ ಬೋನ್ ಸಿ.ವಿ. | ಜರ್ಮನಿ | ಸಾಮಾಜಿಕ |
| ೪. | Solvensha Katolicka Charita | Slovakia | ಶಿಕ್ಷಣ |
| ೫. | Arcidieczni Charita Praha | Czech Republic | ಶಿಕ್ಷಣ |
| ೬. | Gorettistiching | Netherlands | ಶಿಕ್ಷಣ |
| ೭. | Mr. Brian Jmallon | Scotland | ಸಾಮಾಜಿಕ |
| ೮. | The joy Sowers | Belgium | ಸಾಮಾಜಿಕ |
| ೯. | Manos Unidas | Spain | ಸಾಮಾಜಿಕ |
| ೧೦. | Marisa Elosua | Spain | ಶಿಕ್ಷಣ |

**೨.೧೨ ವಿದ್ಯಾರ್ಥಿ ಸಾಲ ಯೋಜನೆ – ಎಡ್ಯೂಕೇರ್**

ಇಂದು ಉತ್ತಮವಾದ ಶಿಕ್ಷಣ ಎಲ್ಲೆಡೆ ಸಿಗುತ್ತಿದೆ. ಆದರೆ ಎಷ್ಟು ಮಕ್ಕಳಿಗೆ ಈ ಶಿಕ್ಷಣ ಸಿಕ್ಕಿದೆ ಎಂಬ ಪ್ರಶ್ನೆ ಇಂದಿಗೂ ಕಾಡುತ್ತಿದೆ. ಬಡತನ, ಅನಕ್ಷರಸ್ಥ ಪೋಷಕರು, ಸಹಾಯಧನದ ಮಾಹಿತಿ

ಕೊರತೆ, ವಿದ್ಯಾರ್ಥಿವೇತನದ ಮಾಹಿತಿ ಕೊರತೆ, ಸರಕಾರದ ಯೋಜನೆಗಳ ಮಾಹಿತಿ ಕೊರತೆಯಿಂದ ಉತ್ತಮವಾದ ಅಥವಾ ಉನ್ನತ ಮಟ್ಟದ ಶಿಕ್ಷಣ ಇಂದು ಬಹಳ ವಿದ್ಯಾರ್ಥಿಗಳಿಗೆ ನನಸಾಗಿ ಬಿಟ್ಟಿದೆ. ಅದರಲ್ಲಿ ಅಲ್ಪಸಂಖ್ಯಾತ ವಿದ್ಯಾರ್ಥಿಗಳು ಈ ಅವಕಾಶಗಳಿಂದ ವಂಚಿತರಾಗಿದ್ದಾರೆ.

ಈ ವಿಷಯವನ್ನು ಮನಗಂಡು ಮಂಗಳೂರು ಕ್ರಿಶ್ಚಿಯನ್ನ್ ಧಾರ್ಮಿಕ ಅಲ್ಪಸಂಖ್ಯಾತರ ಸರಕಾರೇತರ ಸಂಸ್ಥೆ CODP ತನ್ನ ಸಮುದಾಯದ ಜನರು ಶಿಕ್ಷಣದಿಂದ ವಂಚಿತರಾಗಬಾರದು ಎಂಬ ಉದ್ದೇಶದಿಂದ Educare ಎಂಬ ಟ್ರಸ್ಟ್‌ನ್ನು ಸ್ಥಾಪಿಸಿ ಇದರ ಉಪಯೋಗವನ್ನು ಪಡೆಯಲು ಸ್ಥಳೀಯ ಚರ್ಚ್ ಹಾಗೂ ವಲಯ ಮಟ್ಟದಲ್ಲಿ ಮಾಹಿತಿ ನೀಡುತ್ತಿದೆ. ಎಡುಕೇರ್ ಟ್ರಸ್ಟ್ CODPಯ ಅಂಗಸಂಸ್ಥೆಯಾಗಿದ್ದು ೨೦೧೩ ರಲ್ಲಿ ಸ್ಥಾಪನೆಗೊಂಡಿತು. ದುಬಾಯಿ ಯಲ್ಲಿರುವ ಮಂಗಳೂರಿನ ಯಶಸ್ವಿ ಉದ್ಯಮಿ NRI ಶ್ರೀ ಮೈಕೆಲ್ ಡಿಸೋಜಾ ಈ ಟ್ರಸ್ಟ್‌ನ ಪ್ರಮುಖ ಟ್ರಸ್ಟಿಯಾಗಿದ್ದಾರೆ. "ಬಲ ಕೈ ದಾನ ಮಾಡುವುದು ನಿನ್ನ ಎಡಗೈಗೆ ತಿಳಿಯದಿರಲಿ" ಎಂಬ ಬೈಬಲಿನ ಮಾತಿನಂತೆ ಈ ಟ್ರಸ್ಟ್‌ನ ದಾನಿ ಶ್ರೀ ಮೈಕೆಲ್ ಡಿಸೋಜಾರವರು ತಮ್ಮ ಹೆಸರನ್ನು ಜಾಹೀರಾತು ಮಾಡದೇ ಈ ವಿದ್ಯಾರ್ಥಿ ಸಾಲ ಯೋಜನೆಗೆ ಸುಮಾರು ೨೦ ಕೋಟಿ ಹಣವನ್ನು ೫ ವರ್ಷಗಳಲ್ಲಿ ಮೀಸಲಿಟ್ಟಿದ್ದಾರೆ. ಮೊದಲ ವರ್ಷದಲ್ಲಿ ೧,೫೦,೦೦,೦೦೦ ರೂಪಾಯಿಯ ಪ್ರಯೋಜನವನ್ನು ವಿದ್ಯಾರ್ಥಿಗಳಿಗೆ ನೀಡಲಾಗುವುದು. ತದನಂತರ ವಿದ್ಯಾರ್ಥಿಗಳು ಸಾಲ ಹಿಂದೆ ನೀಡುವಾಗ ಈ ಹಣವನ್ನು ಸಹ ಈ ಯೋಜನೆಗೆ ವಿನಿಯೋಗಿಸಲಾಗುವುದು. ಈ ಸಾಲವನ್ನು ಬಡ್ಡಿರಹಿತವಾಗಿ ವಿದ್ಯಾರ್ಥಿಗಳಿಗೆ ನೀಡಲಾಗುವುದು.

**ಈ ಸಾಲಯೋಜನೆಯನ್ನು ಪಡೆಯಲು ಅರ್ಹತೆಗಳು**

- ವಿದ್ಯಾರ್ಥಿ ಸಾಲ ಯೋಜನೆಯನ್ನು ಪಡೆಯಲು ಪಿ.ಯು.ಸಿ.ಯ ಅಥವಾ ೧೦+೨ರ ಶಿಕ್ಷಣವನ್ನು ಮುಗಿದಿರಿಸಿರಬೇಕು. ಪದವಿ ಅಥವಾ ಸ್ನಾತಕ್ಕೋತ್ತರ ಅಥವಾ ವಿಶ್ವವಿದ್ಯಾಲಯಗಳು ಅಂಗೀಕರಿಸಿದ ಡಿಪ್ಲೋಮ ಕೋರ್ಸ್‌ಗಳಿಗೆ ಸಾಲವನ್ನು ನೀಡುತ್ತಾರೆ.
- ೬೦% ಅಂಕವನ್ನು ಸಾಮಾನ್ಯ ಪದವಿಯಲ್ಲಿ ಹಾಗೂ ೭೫% ಅಂಕವನ್ನು ಡಿಪ್ಲೋಮ, ನರ್ಸಿಂಗ್, ಇಂಜಿನಿಯರಿಂಗ್, ವೈದ್ಯಕೀಯ ೬ ಹೋಟೆಲ್ ಮ್ಯಾನೇಜ್‌ಮೆಂಟ್ ಪಡೆದಿರಬೇಕು. ಆದರೂ NEET, CET, COMEDK ಪರೀಕ್ಷೆಗಳಲ್ಲಿ ಉತ್ತಮ ಸಾಧನೆಗೈದ ವಿದ್ಯಾರ್ಥಿಗಳಿಗೆ ೭೦% ಅಂಕಗಳನ್ನು ಸಹ ಪರಿಗಣಿಸುವುದು.
- ದೂರಶಿಕ್ಷಣಕ್ಕೆ, ಖಾಸಗಿ ಶಿಕ್ಷಣ, ಅರೆಕಾಲಿಕ ಶಿಕ್ಷಣಕ್ಕೆ ಸಾಲಸೌಲಭ್ಯ ದೊರೆಯುವುದಿಲ್ಲ.
- ಕುಟುಂಬದ ಎಲ್ಲಾ ಮೂಲಗಳಿಂದ ವಾರ್ಷಿಕ ಆದಾಯ ೩,೦೦,೦೦೦/-ಕ್ಕಿಂತ ಕಡಿಮೆಯಿರಬೇಕು.
- ಮಂಗಳೂರು ಹಾಗೂ ಉಡುಪಿಯ ಜಿಲ್ಲೆಯ ಧಾರ್ಮಿಕ ಅಲ್ಪಸಂಖ್ಯಾತ ಕ್ರಿಶ್ಚಿಯನ್ನರು ಮಾತ್ರ ಈ ಸಾಲದ ಉಪಯೋಗವನ್ನು ಪಡೆಯಬಹುದು. ಒಇಖಅಔಒನ ವಿದ್ಯುತ್ ಬಿಲ್ಲನ್ನು ವಿಳಾಸದ ಪುರಾವೆಯಾಗಿ ಸಲ್ಲಿಸಬೇಕು.

- ಈ ಯೋಜನೆಯ ಉಪಯೋಗ ಪಡೆಯಲು ಸರಕಾರದ ಇತರ ವಿದ್ಯಾರ್ಥಿ ವೇತನವನ್ನು ಪಡೆದಿರಬೇಕು. (ವಿದ್ಯಾರ್ಥಿ ವೇತನದ ಪುರಾವೆಯನ್ನು ಸಲ್ಲಿಸಬೇಕು).
- ತಾಂತ್ರಿಕ ಹಾಗೂ ವೈದ್ಯಕೀಯ ವಿದ್ಯಾರ್ಥಿಗಳು ಸಾಲಸೌಲಭ್ಯವನ್ನು ಪಡೆಯಲು ಅವರ ಪ್ರವೇಶಾತಿ NEFT/CET/COMED-K ಯ ಮೂಲಕ ಆಗಿರಬೇಕು. (ಪುರಾವೆಯನ್ನು ಒದಗಿಸಬೇಕು). ಮ್ಯಾನೇಜ್‌ಮೆಂಟ್ ಸೀಟಿನ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿ ಸಾಲ ದೊರೆಯುವುದಿಲ್ಲ.
- ಒಂದು ಮನೆಯ ಗರಿಷ್ಠ ಇಬ್ಬರಿಗೆ ಸಾಲ ಯೋಜನೆಯನ್ನು ಉಪಯೋಗವನ್ನು ಪಡೆಯಬಹುದು.
- ಶಿಕ್ಷಣ ಮುಗಿಸಿದವರು ೧೮ ತಿಂಗಳ ಒಳಗೆ ಸಾಲವನ್ನು ಹಿಂಪಡಿಸಬೇಕು.

**ಸಾಲ ಸೌಲಭ್ಯದ ನವೀಕರಣದ ಅರ್ಹತೆ**

- ವಿದ್ಯಾರ್ಥಿಯು ಹಿಂದಿನ ಪರೀಕ್ಷೆಯಲ್ಲಿ ಶೇಕಡಾ ೬೦% ಅಂಕವನ್ನು ಪಡೆದಿರಬೇಕು (ದಾಖಲೆಗಳನ್ನು ಒದಗಿಸಬೇಕು).
- ವಿದ್ಯಾರ್ಥಿಯು ಸಂಸ್ಥೆಯು ಆಯೋಜಿಸುವ ಶಿಬಿರಕ್ಕೆ ಕಡ್ಡಾಯವಾಗಿ ಹಾಜರಿರಬೇಕು.
- ಸಂಸ್ಥೆಯು ಕೇಳಿಕೊಂಡಿರುವ ಎಲ್ಲಾ ದಾಖಲೆಯನ್ನು ಒದಗಿಸಬೇಕು.

**ಕನಿಷ್ಠ ದಾಖಲೆಗಳು**

- ಭರ್ತಿ ಮಾಡಿದ ಅರ್ಜಿಯಲ್ಲಿ ವಾಳೆಯ ಗುರಿಕಾರ ಹಾಗೂ ಚರ್ಚಿನ ಮುಖ್ಯ ಗುರುವಿನ ಸಹಿವಿರಬೇಕು.
- ಅರ್ಜಿದಾರರ ಭಾವಚಿತ್ರ
- ಆಧಾರ ಕಾರ್ಡಿನ ಅಥವಾ ರೇಷನ್ ಕಾರ್ಡಿನ ಪ್ರತಿ
- ಇತ್ತೀಚಿನ ಅಂಕಪಟ್ಟಿಯ ಪ್ರತಿ
- ಇತ್ತೀಚಿನ ಮೆಸ್ಕಾಂ ಬಿಲ್ಲಿನ ಪ್ರತಿ ಅಥವಾ ಇತ್ತೀಚಿಗೆ ಶಾಲೆ ಬಿಟ್ಟ ಪ್ರಮಾಣಪತ್ರ
- ಬೇರೆ ವಿದ್ಯಾರ್ಥಿವೇತನಕ್ಕೆ ಅರ್ಜಿ ಹಾಕಿದ/ಸಿಕ್ಕಿದ ದಾಖಲೆ.

**ಸಾಲ ಕೊಡುವ ಅಂದಾಜು ಪಟ್ಟಿ**

ಕೆನರಾ ಅಭಿವೃದ್ಧಿ ಮತ್ತು ಶಾಂತಿ ಸಂಸ್ಥೆಯು ಪ್ರತಿ ವರ್ಷ ವಿದ್ಯಾರ್ಥಿಗಳಿಗೆ ಸಾಲ ನೀಡುವಲ್ಲಿ ಅಂದಾಜು ಪಟ್ಟಿಯನ್ನು ತಯಾರಿಸಿ ಅದರಂತೆ ಸಾಲವನ್ನು ನೀಡುತ್ತಿದೆ. ಈ ವರ್ಷದ ಅಂದಾಜು ಪಟ್ಟಿಯು ಈ ಕೆಳಕಂಡಂತಿದೆ.

| 2017 ನೇ ವರ್ಷದಲ್ಲಿ ಸಾಲ ಕೊಡುವ ಅಂದಾಜು ಪಟ್ಟಿ | | | | |
|---|---|---|---|---|
| ವಿಷಯ | ಬಡ್ಡಿರಹಿತಾ ಸಾಲ (ಒಬ್ಬರಿಗೆ) | ಎಷ್ಟು ವರ್ಷಕ್ಕೆ | ವರ್ಷಕ್ಕೆ ಎಷ್ಟು ವಿದ್ಯಾರ್ಥಿಗಳಿಗೆ | ಒಟ್ಟು ಸಾಲ ಸೌಲಭ್ಯ |
| ಇಂಜಿನಿಯರಿಂಗ್ | 50,000/– | ಗರಿಷ್ಟ 4 ವರ್ಷಕ್ಕೆ | 90 | 45 ಲಕ್ಷ |
| ಮೆಡಿಕಲ್ | 1,00,000/– | ಗರಿಷ್ಟ 4 ವರ್ಷಕ್ಕೆ | 12 | 12 ಲಕ್ಷ |
| ಪ್ಯಾರಾ ಮೆಡಿಕಲ್ | 50,000/– | ಗರಿಷ್ಟ 2 ವರ್ಷಕ್ಕೆ | 21 | 10.50 ಲಕ್ಷ |
| ಸ್ನಾತಕೋತ್ತರ (ಎಮ್ಎ/ಎಮ್ ಕಾಮ್/ಎಲ್ ಎಲ್ ಎಮ್/ಪತ್ರಿಕೋದ್ಯಮ ಇತ್ಯಾದಿ) | 30,000/– | ಗರಿಷ್ಟ 2 ವರ್ಷಕ್ಕೆ | 60 | 30 ಲಕ್ಷ |
| ಬಿ ಎಡ್/ಬಿಎಸ್‌ಸಿ ನರ್ಸಿಂಗ್ ಇತ್ಯಾದಿ | 30,000/– | ಗರಿಷ್ಟ 4 ವರ್ಷಕ್ಕೆ | 75 | 22.50 ಲಕ್ಷ |
| ಸ್ನಾತಕ (ಬಿ ಎ/ಬಿಕಾಮ್) | 20,000/– | ಗರಿಷ್ಟ 3 ವರ್ಷಕ್ಕೆ | 150 | 30 ಲಕ್ಷ |

ಕಳೆದ 3 ವರ್ಷಗಳಲ್ಲಿ ಕೆನರಾ ಅಭಿವೃದ್ಧಿ ಮತ್ತು ಶಾಂತಿ ಸಂಸ್ಥೆಯ ಎಜುಕೇರ್ ಎಂಬ ಟ್ರಸ್ಟ್‌ನಿಂದ ವಿದ್ಯಾರ್ಥಿಸಾಲವನ್ನು ನೀಡಿದ ಮಾಹಿತಿ ಈ ಕೆಳಗಿನಂತಿದೆ.

ಸರಾಸರಿ ವಿದ್ಯಾರ್ಥಿಗಳ ವಿವರ **2013-14-16**

| | 2014-15 | | | 2015-16 | | | 2016-17 | | | ಒಟ್ಟು |
|---|---|---|---|---|---|---|---|---|---|---|
| ವಿಷಯ | ಪುನರ್‌ವರ್ತಿತ | ಹೊಸತು | ಒಟ್ಟು 2014-15 | ಪುನರ್‌ವರ್ತಿತ | ಹೊಸತು | ಒಟ್ಟು 2015-16 | ಪುನರ್‌ವರ್ತಿತ | ಹೊಸತು | ಒಟ್ಟು 2016-17 | |
| ಒಟ್ಟು ವಿದ್ಯಾರ್ಥಿಗಳ ಸಂಖ್ಯೆ | 334 | 494 | 828 | 535 | 510 | 1045 | 605 | 496 | 1101 | 3517 |
| ಒಟ್ಟು ನೀಡಿದ ಮೊತ್ತ | 1,32,22,800 | 1,76,74,50 | 3,08,97,300 | 2,11,33,000 | 2,02,71,100 | 4,14,04,000 | 2,57,85,500 | 2,12,22,500 | 4,70,08,000 | 13,71,29,300 |
| ವಿದ್ಯಾರ್ಥಿಗಳು | 144 | 210 | 354 | 247 | 233 | 480 | 273 | 228 | 501 | 1574 |
| ವಿದ್ಯಾರ್ಥಿನಿಯರು | 190 | 284 | 474 | 288 | 277 | 565 | 332 | 268 | 600 | 1943 |
| ಸ್ನಾತಕ ಪದವಿ | 7 2 | 157 | 229 | 144 | 157 | 301 | 202 | 150 | 352 | 1015 |
| ಸ್ನಾತಕೋತ್ತರ ಪದವಿ | 71 | 114 | 185 | 90 | 148 | 238 | 94 | 143 | 237 | 808 |
| ಇಂಜಿನಿಯರಿಂಗ್ | 114 | 114 | 228 | 168 | 120 | 288 | 185 | 106 | 291 | 948 |
| ನರ್ಸಿಂಗ್ | 48 | 62 | 110 | 74 | 44 | 118 | 79 | 60 | 139 | 435 |
| ಮೆಡಿಕಲ್ | 16 | 16 | 32 | 30 | 16 | 46 | 19 | 9 | 28 | 125 |
| ಡಿಪ್ಲೋಮಾ | 13 | 31 | 44 | 29 | 25 | 54 | 26 | 28 | 54 | 186 |

**ಸಾಲದ ಒಪ್ಪಿಗೆ ಪತ್ರ**

"ಕೆನರಾ ಅಭಿವೃದ್ಧಿ ಮತ್ತು ಶಾಂತಿ ಸಂಸ್ಥೆ" ವಿದ್ಯಾರ್ಥಿಗಳಿಗೆ ಸಾಲ ನೀಡುವಾಗ ಅವರಿಂದ ಠಸೆ ಕಾಗದದಲ್ಲಿ ಒಪ್ಪಂದವನ್ನು ಮಾಡಿರುತ್ತದೆ. ಈ ಒಪ್ಪಂದವು ಸಾಲ ಮರುಪಾವತಿ ಮಾಡಲು ಸಹಕಾರಿಯಾಗುತ್ತದೆ. ಸಂಸ್ಥೆಯ ಒಪ್ಪಂದವನ್ನು ಪ್ರಬಂಧದ ಕೊನೆಗೆ ಹಾಕಲಾಗಿದೆ. ಖಂಡಿತವಾಗಿಯೂ, ಎಡ್ಯೂಕೇರ್ ವಿದ್ಯಾರ್ಥಿಸಾಲ ಯೋಜನೆ ದ.ಕ. ಹಾಗೂ ಉಡುಪಿ ಜಿಲ್ಲೆಯ ವಿದ್ಯಾರ್ಥಿಗಳಿಗೆ ವರದಾನವಾಗಿದೆ.

**ಸಾಲ ಮರುಪಾವತಿ**

೨೦೧೩ ರಲ್ಲಿ ಸ್ಥಾಪನೆಯಾದ ಸಿಒಡಿಪಿ ಅಂಗಸಂಸ್ಥೆ ಎಡುಕೇರ್ ಸಾವಿರಾರು ವಿದ್ಯಾರ್ಥಿಗಳಿಗೆ ಸಾಲವನ್ನು ನೀಡುತ್ತಾ ಬಂದಿದ್ದು ೯೯ ಪ್ರತಿಶತ ಸಾಲವು ವಾಪಸಾಗಿರುತ್ತದೆ. ಕಳೆದ ವರ್ಷದಲ್ಲಿ ಕೇವಲ ಮೂರು ಜನ ವಿದ್ಯಾರ್ಥಿಗಳು ಸಾಲವನ್ನು ಮರುಪಾವತಿಸಲಿಲ್ಲ. ಯಾಕೆಂದರೆ, ಇಬ್ಬರು ವಿದ್ಯಾರ್ಥಿಗಳ ಆಕಸ್ಮಿಕ ಮರಣ ಹೊಂದಿದ್ದರೆ, ಹಾಗೂ ಒಬ್ಬ ವಿದ್ಯಾರ್ಥಿಯು ತನ್ನ ಶಿಕ್ಷಣವನ್ನು ಅರ್ಧದಲ್ಲಿಯೇ ಮೊಟಕುಗೊಳಿಸಿ ಊರು ಬಿಟ್ಟ ಕಾರಣ ಸಾಲವನ್ನು ಮರುಪಾವತಿಸಲು ಸಾಧ್ಯವಾಗಲಿಲ್ಲ. ಅಂತೆಯೇ ಎಡುಕೇರ್ ಟ್ರಸ್ಟ್ ಈ ಸಾಲವನ್ನು ಮನ್ನಾ ಮಾಡಿದೆ.

**೨.೧೨ ಸಾಹಿತ್ಯ ಸಮೀಕ್ಷೆ**

ಇಂದು ಅಭಿವೃದ್ಧಿ ಅತ್ಯಂತ ಜನಜನಿತವಾದ ಒಂದು ಪರಿಭಾವನೆಯಾಗಿದೆ. ಅಭಿವೃದ್ಧಿ ಪ್ರಗತಿಯಲ್ಲಿ ಮುಂದುವರಿಯುವುದು ಎಂದು ಹೇಳಿದರೂ ಸಹ ಕೆಳಮಟ್ಟದಿಂದ ಮೇಲ್ಮಟ್ಟಕ್ಕೆ ಬದಲಾವಣೆ ಅಥವಾ ಸಾಗುವ ಪ್ರಕ್ರಿಯೆ ಎಂದು ಹೇಳಬಹುದು. ಅಭಿವೃದ್ಧಿ ಎಂದರೆ ಕೇವಲ ಆರ್ಥಿಕಾಭಿವೃದ್ಧಿ ಅಲ್ಲ ಬದಲಾಗಿ ಅಭಿವೃದ್ಧಿ ಎಂಬ ಪದವು ವಿಶಾಲ ಅರ್ಥದಿಂದ ಕೂಡಿದೆ. ಆದರೆ, ಸಾಮಾಜಿಕ ಅಭಿವೃದ್ಧಿಯು ಅಭಿವೃದ್ಧಿಯ ಬಹುಮುಖ್ಯ ಅಂಶ ಎಂದು ಬಹಳಷ್ಟು ಜನರು ನಂಬಿದ್ದಾರೆ. ಅಂತೆಯೇ ಎನ್.ಜಿ.ಎ.ಗಳು ಈ ಅಭಿವೃದ್ಧಿಯ ಕೆಲಸವನ್ನು ನಿರಂತರವಾಗಿ ಮಾಡುತ್ತಿವೆ. ಅವರನ್ನು ಬದಲಾವಣೆಯ ಏಜೆಂಟರು ಎಂದು ಹೇಳಬಹುದು. ಈ ಪ್ರಬಂಧದ ಉದ್ದೇಶಕ್ಕೆ ಅನುಗುಣವಾಗಿ ಬೇರೆ ಎನ್‌ಜಿಒಗಳು ಮಾಡಿದ ಕೆಲಸ ಹಾಗೂ ಅದರ ಸಾಹಿತ್ಯಿಕ ಸಮೀಕ್ಷೆಯನ್ನು ಇಲ್ಲಿ ಉಲ್ಲೇಖಿಸಲಾಗಿದೆ.

ಅತಿಯಾದ ಕುಡಿತದಿಂದ ಎಷ್ಟೋ ಕುಟುಂಬಗಳು ಬೀದಿ ಪಾಲಾಗಿವೆ. ಇದು ಮನುಷ್ಯನ ವ್ಯಕ್ತಿತ್ವದ ಮೇಲೆ ಪರಿಣಾಮ ಬೀರುತ್ತದೆ. ಬೆಳ್ತಂಗಡಿ ತಾಲೂಕಿನ ಶ್ರೀ ಕ್ಷೇತ್ರ ಧರ್ಮಸ್ಥಳ ರೂರಲ್ ಡೆವಲಪ್‌ಮೆಂಟ್ ಪ್ರೊಜೆಕ್ಟ್ಸ್ (SKDRDP) ೧೯೮೨ ರಲ್ಲಿ ಸ್ಥಾಪನೆಗೊಂಡು ಮದ್ಯವ್ಯಸನಿಗಳ ಉದ್ದಾರಗೋಸ್ಕರ ಕೆಲಸ ಮಾಡುತ್ತಿದೆ. ಬೆಳ್ತಂಗಡಿ ತಾಲೂಕಿನ ೮೧ ಗ್ರಾಮಗಳ ೧೮೨೦೦ ಬಡ ಕುಟುಂಬದವರನ್ನು ಗುರುತಿಸಿ ಅವರ ಏಳಿಗೆಗಾಗಿ ಕೃಷಿ ಸಹಾಯ, ನೀರಾವರಿಗೆ ನೆರವು, ಮನೆ ಕಟ್ಟಲು ನೆರವು, ಆರೋಗ್ಯ ಮತ್ತು ಶಿಕ್ಷಣಕ್ಕೆ ನೆರವನ್ನು ನೀಡಿದೆ. ಈ ರೀತಿಯ ನೆರವಿನಿಂದ ಫಲಾನುಭವಿಗಳಲ್ಲಿ ಒಟ್ಟು ೧೦೦ ಕೋಟಿಯ ಆಸ್ತಿಯನ್ನು ರೂಪಿಸಲು ಸಾಧ್ಯವಾಗಿದೆ. ಅಂತೆಯೇ

ಅವರು 6 ಕೋಟಿಯನ್ನು ಹೂಡಿಕೆ ಮಾಡಿದ್ದಾರೆ. ಇದು ಕುಡಿತದ ಚಟವನ್ನು ಬಿಟ್ಟು ಅವರಿಗೆ ಹೊಸ ಬಾಳನ್ನು ದೊರೆಯಲು ಸಹಕಾರಿಯಾಗಿದೆ. ಶ್ರೀ ಕ್ಷೇತ್ರ ಧರ್ಮಸ್ಥಳ ರೂರಲ್ ಡೆವಲಪ್‌ಮೆಂಟ್ ಪ್ರೊಜೆಟ್ಸ್ ಸಹಕಾರಿಯಾಗಿದೆ. (NGO and development, New Delhi-೨೦೦೪).

ಔರಂಗಬಾದ್‌ನಿಂದ ೩೩ ಕಿ.ಮೀ. ದೂರದ ಅಡಗೋನ್ ಎಂಬಲ್ಲಿ ೧೫೦೦ ಜನರ ೩೦೦ ಮನೆಗಳಿವೆ. ಈ ಹಳ್ಳಿಯಲ್ಲಿ ೧೦೦೦ ಹೆಕ್ಟೇರ್ ಇಡುವಳಿ ಇದ್ದು ಮರಾಠರ ಪ್ರಾಬಲ್ಯ ಜಾಸ್ತಿಯಿರುವ ಹಳ್ಳಿ. ಈ ಹಳ್ಳಿಯಲ್ಲಿ ಮಳೆ ಕೊಯ್ಲಿನ ಯೋಜನೆಯನ್ನು ೫ಅ೫೫೫ಂ೫ ನ ಮಾರ್ಗದರ್ಶನದಲ್ಲಿ ೧೯೮೬ ರಲ್ಲಿ ಕೈಗೊಳ್ಳಲಾಯಿತು. ಈ ಜನರ ಉತ್ಸಾಹ ಹಾಗೂ ಸಹಕಾರದಿಂದ ೧೯೮೯ ರಲ್ಲಿ ಈ ಯೋಜನೆಯು ಮುಗಿಯಿತು. ಹಿಡುವಳಿಯಲ್ಲಿ ಏರಿಕೆಯಾಗಿ ರೈತರು ದೊಡ್ಡ ಜಾಗದಲ್ಲಿ ಸಾಗುವಳಿಯನ್ನು ಮಾಡಲು ಸುರುಮಾಡಿದರು. ಒಟ್ಟು ಹಳ್ಳಿಯ ಆದಾಯವು ೧ ಮಿಲಿಯನ್‌ನಿಂದ ೧೦ ಮಿನಿಯನ್ನ್‌ಗೆ ಏರಿತು. ಈ ಮಳೆಕೊಯ್ಲಿನ ಜೊತೆಗೆ ಸಮುದಾಯದ ಅಥವಾ ಹಳ್ಳಿಯ ಪ್ರಗತಿಗೆ ಬೇರೆ ಬೇರೆ ಕಾರ್ಯಕ್ರಮಗಳು ಬಂದವು. ಈ ಕಾರ್ಯಕ್ರಮವನ್ನು ಸರ್ಕಾರೇತರ ಸಂಸ್ಥೆ (ಮರಾಠವಾದ ಸೇಟಿ ಸಹಾಯಕ ಮಂಡಲಿ ಔರಂಗಬಾದ್) ಕೈಗೊಂಡು ಯಶಸ್ವಿಯಾಗಿದೆ. (NGO and development, New Delhi-೨೦೦೪).

ಬಾಂಗ್ಲಾದೇಶದಲ್ಲಿ BRAC ಎಂಬ NGO ಗ್ರಾಮೀಣ ಜನರ ಅಭಿವೃದ್ಧಿ ಕೆಲಸ ಮಾಡುತ್ತಿದೆ. ೬೪ ಜಿಲ್ಲೆಗಳಲ್ಲಿ ಆರೋಗ್ಯ ಮತ್ತು ಶಿಕ್ಷಣಕ್ಕೆ ಒತ್ತು ನೀಡಿ ಸುಮಾರು ೫೦,೦೦೦ ಜನರಿಗೆ ಕಾರ್ಯಕ್ರಮದ ಸವಲತ್ತು ತಲುಪಿದೆ. ಒಂದು ಮಿಲಿಯನ್‌ಗೂ ಜಾಸ್ತಿಗೂ ಮಕ್ಕಳು ಶಿಕ್ಷಣ ಪಡೆಯುತ್ತಿದ್ದಾರೆ ೬೦,೦೦೦ ಜನರು ಕೆಲಸ ಮಾಡುತ್ತಿದ್ದಾರೆ. ಘೋಶಿಕಾ ಎನ್ನುವ ಇನ್ನೊಂದು ಎನ್‌ಜಿಒ (Proshika) ೫೭ ಜಿಲ್ಲೆಗಳಲ್ಲಿ ಕೆಲಸ ಮಾಡುತ್ತಿದ್ದು ೧೦ ಮಿಲಿಯನ್ ಜನರು ಇದರ ಉಪಯೋಗ ಪಡೆದಿದ್ದಾರೆ. ಆಂತರಿಕ ಘರ್ಷಣೆ, ಸಂಘರ್ಷ, ಮಾರುಕಟ್ಟೆಯು ಬಿದ್ದಾಗ, ಈ ಎನ್‌ಜಿಒಗಳು ವಿವಿಧ ಕಾರ್ಯಕ್ರಮ ಮೂಲತ ಜನರಿಗೆ ಭದ್ರತೆಯನ್ನು ನೀಡಿವೆ. (Atik-ur-rohomans.m Effect- andinpacts of NGO'S in modern World, Aadi Publications, Jaipur – ೨೦೧೧).

ಸರ್ಕಾರೇತರ ಸಂಘಸಂಸ್ಥೆಗಳು ಪರಿಸರ ರಕ್ಷಣೆಯ ಕೆಲಸವನ್ನು ಮಾಡುತ್ತಿವೆ. ಪರಿಸರವನ್ನು ಸ್ವಚ್ಛವಾಗಿರಿಸುವುದು, ಸಂಪನ್ಮೂಲಗಳ ಮಿತವಾದ ಬಳಕೆ ಹಾಗೂ ಪುನರ್ ಬಳಸಬಹುದಾದ ಸಂಪನ್ಮೂಲಗಳ ಬಳಕೆಗೆ ಒತ್ತು ನೀಡುತ್ತವೆ. ೧೯೮೯ ರಲ್ಲಿ ಶ್ರೀಮತಿ ಪ್ರೇಮಾ ಗೋಪಾನಾನ್‌ನಿಂದ ಸ್ಥಾಪಿತವಾದ ಪುಣೆಯ "ಸ್ವಯಂ ಶಿಕ್ಷಣ ಪ್ರಯೋಗ" ಎಂಬ ಎನ್‌ಜಿಒ ಪರಿಸರದ ರಕ್ಷಣೆಯ ವಿವಿಧ ಕೆಲಸವನ್ನು ಮಾಡುತ್ತದೆ. ಈ ಎನ್‌ಜಿಒ ೨೦೧೬ ರ ವಿಶ್ವಸಂಸ್ಥೆಯ ಪರಿಸರ ಪ್ರಶಸ್ತಿಯನ್ನು ಪಡೆದುಕೊಂಡಿದೆ. ಅವರ ಕ್ಲೀನ್ ಎನರ್ಜಿ ಪ್ರೊಜೇಕ್ಟ್‌ಗೆ ವಿಶ್ವಸಂಸ್ಥೆಯು ಪ್ರಶಸ್ತಿಯನ್ನು ನೀಡಿದೆ. ಮಹಾರಾಷ್ಟ್ರ ಹಾಗೂ ಬಿಹಾರ ರಾಜ್ಯದಲ್ಲಿ ೧,೧೦೦ ಮಹಿಳೆಯರು ಈ

ಯೋಜನೆಯ ಫಲಾನುಭವಿಯಾಗಿದ್ದಾರೆ. ಊರುವಲು ಹಾಗೂ ಸೀಮೆ ಎಣ್ಣೆಯಿಂದ ಆಗುವ ಪರಿಸರ ನಾಶಕ್ಕೆ ಈ ಕ್ಲೀನ್ ಎನರ್ಜಿ ಯೋಜನೆ ಸುರಕ್ಷವಾಗಿದೆ. ಫಲಾನುಭವಿಗಳು ಅಡುಗೆಯನ್ನು ಕ್ಲೀನ್ ಎನರ್ಜಿ ಸ್ಟವ್ ಬಳಸಿ ಉತ್ತಮವಾಗಿ ಅಡುಗೆಯನ್ನು ಮಾಡಬಹುದು. ಇಂದು ಸ್ವತಃ ನೀರು, ಶಕ್ತಿ ಹಾಗೂ ನೈರ್ಮಲ್ಯ ಉತ್ಪನ್ನಗಳನ್ನು ಈ ಯೋಜನೆಯ ಫಲನುಭವಿಗಳು ಮಾಡುತ್ತಾರೆ. (The Hindu ೧/೭೧/೨೦೧೬).

ಮಾನವ ಹಕ್ಕುಗಳ ರಕ್ಷಣೆಗೆ ಎನ್‌ಜಿಓಗಳು ಶ್ರಮಿಸುತ್ತಿರುವುದು ನಮಗೆಲ್ಲರಿಗೂ ಗೊತ್ತಿರುವ ವಿಷಯ. ಬೋಪಾಲ್‌ನ ಅನಿಲ ದುರ್ಘಟನೆಯಿಂದ ಸುಮಾರು ೩೫೦೦ ಜನ ಸತ್ತು ಇಂದಿಗೂ ಸಾವಿರಾರು ಜನ ವಿವಿಧ ರೀತಿಯ ಅನಾರೋಗ್ಯದಿಂದ ನರಳುತ್ತಿದ್ದಾರೆ, ಎನ್‌ಜಿಓಗಳು ಅವರ ಚಿಕಿತ್ಸೆಗೆ ಸ್ಪಂದಿಸಿ, ಸರಕಾರದ ಇಲಾಖೆಯ ಪ್ರಯೋಜನವನ್ನು ಅವರಿಗೆ ಸಿಗುವಂತೆ ಶ್ರಮಿಸುತ್ತಿದ್ದಾರೆ ಮತ್ತು ಅವರ ಹಕ್ಕಿಗೋಸ್ಕರ ಹೋರಾಡುತಿದ್ದಾರೆ. ಕೇಂದ್ರ ಸರಕಾರ ಹಾಗೂ ಮದ್ಯಪ್ರದೇಶ ಸರಕಾರ ಅನಾರೋಗ್ಯ ಪೀಡಿತರನ್ನು ಗುರುತಿಸಿ ಅವರ ನೆರವಿಗೆ ಧಾವಿಸಬೇಕು ಎಂದು "ಸಂಬಾವನ್ ಟ್ರಸ್ಟ್" – ಎನ್‌ಜಿಓ ಆಧಾರಿತ ಸಂಸ್ಥೆಯ ಮುಖ್ಯಸ್ಥ ಶಾಂತಿನಾಥ್ ಸರಂಗೀ NDTV ಯಲ್ಲಿ ಹೇಳಿ ಕೊಂಡಿದ್ದಾರೆ. ಈ ಎನ್‌ಜಿಓಯು ೨೫೦೦ ವಿವಿಧ ಅನಾರೋಗ್ಯದಿಂದ ಬಳಲುತ್ತಿದ್ದ ಮಕ್ಕಳನ್ನು ಗುರುತಿಸಿ ಅವರಿಗೆ ಚಿಕಿತ್ಸೆ ನೀಡುತ್ತಿದೆ. ಅವರ ಹಕ್ಕಿಗೋಸ್ಕರ ಚಳುವಳಿಗಳನ್ನು ರೂಪಿಸಿ ಹೊರಡುತ್ತಿದೆ (December ೨. ೨೦೧೫ NDTV)

ಕೇರಳದ ಕಾಸರಗೋಡು ಜಿಲ್ಲೆಯಲ್ಲಿ ಎಂಡೋಸಲ್ಫಾನ್ ಸಿಂಪಡಿಕೆಯಿಂದ ಆರೋಗ್ಯಪೀಡಿತರ ಏಳಿಗೆಗೋಸ್ಕರ ಎನ್‌ಜಿಓಗಳು ಹೋರಾಡುತ್ತಿವೆ. ಕಾಸರಗೋಡಿನ ಜಿಲ್ಲೆಯ ೯ ಗ್ರಾಮಗಳ ೧೨,೦೦೦ ಸಾವಿರ ಎಕರೆ ಭೂಮಿಯಲ್ಲಿ ಬೆಳೆದ ಗೇರು ಮರಕ್ಕೆ ಸಿಂಪಡಿಸಿದ ವಿಷಕಾರಿ ಎಂಡೋಸಲ್ಫಾನ್ ಎಂಬ ಮದ್ದಿನಿಂದ ಇಂದಿಗೂ ಸಾವಿರಾರು ಜನ ವಿವಿಧ ರೋಗಕ್ಕೆ ತುತ್ತಾಗಿದ್ದಾರೆ. ೧೯೭೬-೨೦೦೦ ಪ್ಲಾಂಟೇಸನ್ ಕಾರ್ಪೋರೇಷನ್ ಅಪ್ ಕೇರಳ ಎಂಬ ಸಂಸ್ಥೆಯ ವತಿಯಿಂದ ಸಿಂಪಡಿಸಿದ ಮದ್ದಿನಿಂದ ಜನರು ವಿವಿಧ ಕಾಯಿಲೆಗೆ ತುತ್ತಾಗಿದ್ದರೆ ಕೇರಳ ಸರಕಾರವು ೨೦೧೧ ರಲ್ಲಿ ಎಂಡೋಸಲ್ಫಾನ್‌ನ್ನು ನಿಷೇಧಿಸಿದೆ. ಆದರೂ ಜನರ ಸಮಸ್ಯೆಗೆ ಸ್ಪಷ್ಟವಾಗಿ ಸ್ಪಂದಿಸಿಲ್ಲ. ಈ ಸಮಸ್ಯೆ ದ.ಕ. ಜಿಲ್ಲೆಯ ಪುತ್ತೂರು ತಾಲೂಕಿಗೂ ತಗುಲಿದೆ. ಶ್ರೀ ಕ್ಷೇತ್ರ ಧರ್ಮಸ್ಥಳ ರೂರಲ್ ಡೆವಲಪ್‌ಮೆಂಟ್ ಎಂಬ ಎನ್‌ಜಿಓ ಯು ಎಂಡೋಸಲ್ಫಾನ್ ಪೀಡಿತರಿಗೆ ಆರೋಗ್ಯದ ಬಗ್ಗೆ ಕಾಳಜಿ ವಹಿಸಿ ಡೇ ಕೇರ್ ಸೆಂಟರನ್ನು ಕೊಕ್ಕಡ ಮತ್ತು ಕೊಯ್ಲುದಲ್ಲಿ ಸ್ಥಾಪಿಸಿದೆ. ಅಕ್ಟೋಬರ್ ೨೦೧೫ ರಲ್ಲಿ ಕರ್ನಾಟಕ ಸರ್ಕಾರವು ಈ ಎನ್‌ಜಿಓಗೆ ೧.೫ ಕೋಟಿ ಹಣ ಬಿಡುಗಡೆ ಮಾಡಿದೆ. ಅಲ್ಲದೆ ೧೦ ಲಕ್ಷ ರೂಪಾಯಿ ಬೇರೆ ದೇಣಿಗೆಯನ್ನು ಎನ್‌ಜಿಓ ಸ್ವೀಕರಿಸಿದೆ. (The Hindu, April ೦೪/೨೦೧೬) ಎಡನೀರು ಸ್ವಾಮೀಜಿ ಸ್ಕೂಲಿನ NSS ನ ಮಕ್ಕಳು ಸೇರಿ "ಎಂಡೋಸಲ್ಫಾನ್ ವಿಕ್ಟಿಮ್ ಸಪೋರ್ಟ್ ಗ್ರೂಪ್" ಎಂಬ ಸ್ಥಳೀಯ ಎನ್‌ಜಿಓದೊಂದಿಗೆ ಕೂಡಿ ಎಂಡೋಸಲ್ಫಾನ್ ಪೀಡಿತರ ಮನೆಗೆ ಹಂಚಿನ ಛಾವಣಿಯನ್ನು ಮಾಡಲು ಸಹಕರಿಸಿದ್ದು ದ ಟೈಮ್ಸ್ ಆಂಗ್ಲ ದಿನಪತ್ರಿಕೆ ವರದಿ ಮಾಡಿದೆ.

ಸ್ಮೈಲ್ ಎಂಬ ಎನ್‌ಜಿಒ ಬಡ ಮಕ್ಕಳ ಶಿಕ್ಷಣಕ್ಕೆ ಶ್ರಮಿಸುತ್ತಿದೆ. ತಳಹಂತದ ಶಿಕ್ಷಣವನ್ನು ಅನಾಥಮಕ್ಕಳಿಗೆ ನೀಡುತ್ತಾ ಬಂದಿದೆ. ಶಿಕ್ಷಣದಿಂದ ಮಕ್ಕಳು ತಮ್ಮ ಹಕ್ಕುಗಳನ್ನು ಚಲಾಯಿಸಲು ಶಕ್ತರಾಗುತ್ತಾರೆ ಎಂಬ ಮಾತಿನಂತೆ ಬಡ ಹಾಗೂ ಅನಾಥ ಮಕ್ಕಳಿಗೆ ಶಿಕ್ಷಣವನ್ನು ನೀಡುತ್ತಿದೆ. ಈ ಎನ್‌ಜಿಒಯ ನಾಲ್ಕು ರೀತಿಯ ಶಿಕ್ಷಣವನ್ನು ಮಕ್ಕಳಿಗೆ ನೀಡುತ್ತಿದೆ. ಪ್ರಿ ಸ್ಕೂಲ್ ೩ ರಿಂದ ೬ ರವರೆಗೆ, ಔಪಚಾರಿಕ ಶಾಲೆ ೬-೧೪ ಎಂಬ  ಪರಿಹಾರಕ ಶಾಲೆ, ಸೇತುಬಂದ ತರಬೇತಿ ೧೪-೧೮ ವರ್ಷದ ಮಕ್ಕಳಿಗೆ ನೀಡುತ್ತಿದೆ. ಅಂತೆಯೇ ಬಾಲಕಾರ್ಮಿಕರು, ಬಡಮಕ್ಕಳು, ನಿರಾಶ್ರಿತ ಮಕ್ಕಳು ಕಲ್ಯಾಣಗೋಸ್ಕರ ಶಿಕ್ಷಣದ ನೆರವು ನೀಡುತ್ತಿದೆ. ಈ ಎನ್‌ಜಿಒದಿಂದ ಸುಮಾರು ೨೧,೩೪೬  ಮಕ್ಕಳು ನೇರ ಶಿಕ್ಷಣವನ್ನು ಪಡೆದಿದ್ದಾರೆ ಹಾಗೂ ೩೪ ಶಿಕ್ಷಣ ಸಂಸ್ಥೆಗಳಿಗೆ ಈ ಎನ್‌ಜಿಒ ನೆರವನ್ನು ನೀಡುತ್ತಿದೆ. ಅಲ್ಲದೆ ಸುಮಾರು ೮೦೦೦ ಮಕ್ಕಳಿಗೆ ಪೌಷ್ಟಿಕಾಂಶದ ಆಹಾರ ನೀಡುತ್ತಿದ್ದು, ೬೮೭೯ ಮಕ್ಕಳಿಗೆ ಸೇತುಬಂಧ ಕೋರ್ಸು ಮೂಲತಃ ಪುನಃ ಶಿಕ್ಷಣವನ್ನು ಮುಂದುವರಿಸುವಂತೆ ಮಾಡಿದೆ. ಈ ಕೆಲಸವನ್ನು ಮನಗಂಡು ಸಂಸ್ಥೆಯ ಪಾಲುದಾರ ಶ್ರೀಮತಿ ಜಾನಕಿ ವಸಂತ್ ಅವರಿಗೆ 'ನಾರಿ ಶಕ್ತಿ' ಎಂಬ ಪ್ರಶಸ್ತಿಯನ್ನು ೨೦೧೭ ಮಾರ್ಚ್ ತಿಂಗಳ ಎಂಟರಂದು ರಾಷ್ಟ್ರಪತಿಯವರು ನೀಡಿದರು. (www simile foundationindia /Smt/ Janaki-vasant-11 month 2017).

ಮಂಗಳೂರಿನ ಕ್ರಿಶ್ಚಿಯನ್ SRA ಧರ್ಮಭಗಿನಿಯರ ಎನ್‌ಜಿಒ ಸಂಸ್ಥೆ "ಧರ್ಮಜ್ಯೋತಿ ಸೋಶಿಯಲ್ ಸೆಂಟರ್", ವಾಮಂಜೂರು-ವಿದ್ಯಾರ್ಥಿಗಳಿಗೆ ತಮ್ಮ ವಿದ್ಯಾಭ್ಯಾಸವನ್ನು ಮುಂದುವರಿಸಲು ವಿವಿಧ ರೀತಿಯಲ್ಲಿ ಸಹಾಯ ಮಾಡುತ್ತಿದೆ. ಈ ಸಂಸ್ಥೆಯು ೧೯೮೧ ರಲ್ಲಿ ಆರಂಭವಾಗಿದ್ದು ೧೧೨ ಗ್ರಾಮಗಳಲ್ಲಿ ಈ ಸಂಸ್ಥೆ ತನ್ನ ಕೆಲಸವನ್ನು ನಿರ್ವಹಿಸುತ್ತಿದೆ. ೩೨ ಸ್ವಸಹಾಯ ಗುಂಪುಗಳು, ೪ ಮಹಿಳಾ ಸಂಘಟನೆಗಳು, ೬ ಯುವಜನರ ಸಂಘಟನೆ, ೭ ಮಕ್ಕಳ ಸಂಘಟನೆವಿದ್ದು, ದ.ಕ. ಹಾಗೂ ಉಡುಪಿಯ ಬಡ ವಿದ್ಯಾರ್ಥಿಗಳಿಗೆ ವಿದ್ಯಾಭ್ಯಾಸಗೋಸ್ಕರ ವಿದ್ಯಾರ್ಥಿವೇತನ, ಬ್ಯಾಗ್, ಪುಸ್ತಕಗಳನ್ನು ಒದಗಿಸುತ್ತಿದೆ. ಈ ವರ್ಷದಲ್ಲಿ ೩೦ಲಕ್ಷ ರೂಪಾಯಿಯನ್ನು ವಿದ್ಯಾಭ್ಯಾಸಕ್ಕೋಸ್ಕರ ವಿನಿಯೋಗಿಸಿವೆ. (www Dharmayothisc.org).

ಮಂಗಳೂರಿನ ಜೀವನ್‌ದಾರ್ ಎನ್ನುವ ಬೆಥನಿ ಧರ್ಮಭಗಿನಿಯರ ಎನ್‌ಜಿಒ ೨೦೧೩ ರಲ್ಲಿ ಆರಂಭವಾಗಿದ್ದು ಬಡಮಕ್ಕಳ ವಿದ್ಯಾಭ್ಯಾಸಕ್ಕೋಸ್ಕರ ವಿವಿಧ ರೀತಿಯ ಕಾರ್ಯಕ್ರಮಗಳನ್ನು ಹೈಸ್ಕೂಲ್ ಹಾಗೂ ಕಾಲೇಜ್ ಶಿಕ್ಷಣವನ್ನು ಪಡೆಯಲು ಬಡಮಕ್ಕಳಿಗೆ ಸಹಾಯ ಮಾಡುತ್ತದೆ.

ಬೆಳ್ತಂಗಡಿ ತಾಲೂಕಿನ "ದಕ್ಷಿಣಕನ್ನಡ ರೂರಲ್ ಡೆವಲಪ್‌ಮೆಂಟ್ ಸೊಸೈಟಿ" ಎಂಬ ಕ್ರಿಶ್ಚಿಯನ್ಸ್ ಎನ್‌ಜಿಓ ೧೯೮೩ ರಲ್ಲಿ ಸ್ಥಾಪನೆಗೊಂಡಿದ್ದು ಬೆಳ್ತಂಗಡಿ ಪೇಟೆಯಲ್ಲಿ ಇದರ ಮುಖ್ಯ ಕಚೇರಿಯನ್ನು ಹೊಂದಿದೆ.

ಮಹಿಳಾ ಸಬಲೀಕರಣ, ಆರೋಗ್ಯ, ಸ್ವಸಹಾಯ ಗುಂಪು, ಮಾನವ ಹಕ್ಕುಗಳ ವಿರುದ್ಧ ಹೋರಾಟ ಹಾಗೂ ಶಿಕ್ಷಣಕ್ಕೆ ಒತ್ತು ನೀಡುತ್ತಿದೆ. ಬೆಳ್ತಂಗಡಿ ತಾಲೂಕಿನ ಬಡ ಮಕ್ಕಳಿಗೆ ಶಿಕ್ಷಣ ಮುಂದುವರಿಸಲು ಧನಸಹಾಯ ಮಾಡುತ್ತಿದೆ.

ಹೀಗೆ ಎನ್‌ಜಿಓಗಳು ಸಾಮಾಜಿಕ ಅಭಿವೃದ್ಧಿಯ ವಿವಿಧ ರೀತಿಯ ಕೆಲಸವನ್ನು ಮಾಡುತ್ತಿವೆ. ಸಿಓಡಿಪಿ ಎಂಬ ಸಂಸ್ಥೆಯು ಇಂದು ರೀತಿಯ ಕೆಲಸವನ್ನು ಮಾಡುತ್ತಿದ್ದು ಅವುಗಳ ಬಗ್ಗೆ ಚರ್ಚಿಸಿ ಅಂಕಿ–ಅಂಶಿಗಳಿಂದ ವಿಶ್ಲೇಷಿಸಬೇಕಾಗಿದೆ. ಈ ಅಧ್ಯಯನವನ್ನು ಮುಂದಿನ ಅಧ್ಯಾಯದಲ್ಲಿ ಕೈಗೊಂಡಿದೆ.

## ಅಧ್ಯಾಯ – ೩

## ಅಂಕಿ ಅಂಶಗಳ ವಿಶ್ಲೇಷಣೆ

### ೩.೧. ಪ್ರವೇಶ

ಜನತಾಸೇವೆಯನ್ನು ಜನಾರ್ಧನನ ಸೇವೆ ಎಂದು ಪರಿಗಣಿಸಿ ಸಿಒಡಿಪಿಯು ನಿರಂತರವಾಗಿ ದ.ಕ., ಉಡುಪಿ ಹಾಗೂ ಕಾಸರಗೋಡು ಜಿಲ್ಲೆಯಲ್ಲಿ ವಿವಿಧ ಅಭಿವೃದ್ಧಿ ಕೆಲಸಗಳನ್ನು ಮಾಡುತ್ತಿದೆ. ಅಭಿವೃದ್ಧಿ ಆಗಬೇಕಾದರೆ ಯಾವುದೇ ಒಂದು ಸಮುದಾಯದ ಸದಸ್ಯರು ತಮ್ಮ ವಿವಿಧ ಯೋಜನೆಗಳಿಗೆ ತಮ್ಮಲ್ಲಿರುವ ಸಂಪನ್ಮೂಲಗಳನ್ನು ಸಮರ್ಪಕವಾಗಿ ಬಳಸಿ ತಮ್ಮ ಜೀವನ ಮಟ್ಟದಲ್ಲಿ ಕಂಡುಕೊಂಡ ಬದಲಾವಣೆ ಅಭಿವೃದ್ಧಿ ಎನ್ನಬಹುದು. ಈ ಅಭಿವೃದ್ಧಿ ಸಾಧಿಸಲು ವಿವಿಧ ವಿಧಾನಗಳಿವೆ. ಸಮುದಾಯದ ಶಿಕ್ಷಣ, ಸಬಲೀಕರಣ, ಪಾಲುಗೊಳ್ಳುವಿಕೆ, ಸಂಪನ್ಮೂಲಗಳ ಕ್ರೋಢೀಕರಣ ಇತ್ಯಾದಿ. ಈ ರೀತಿಯ ಸಮುದಾಯಿಕ ಅಭಿವೃದ್ಧಿಗೆ ಬೇರೆ-ಬೇರೆ ಜಾತಿವಾರು ಸಂಘಟನೆಗಳು, ಎನ್‌ಜಿಒಗಳು, ರಾಜಕೀಯ ಪಕ್ಷ ಬೆಂಬಲಿತ ಸಂಸ್ಥೆಗಳು ಶ್ರಮಿಸುತ್ತಿವೆ. ಮಂಗಳೂರು ಕ್ರಿಶ್ಚಿಯನ್ ಸಮುದಾಯದ ಅಭಿವೃದ್ಧಿಗೆ ಸಮುದಾಯದ ಎನ್‌ಜಿಒ ಕೆನರ ಅಭಿವೃದ್ಧಿ ಮತ್ತು ಶಾಂತಿ ಸಂಸ್ಥೆ ವಿವಿಧ ಕಾರ್ಯಕ್ರಮದೊಂದಿಗೆ ಸಮುದಾಯದ ಏಳಿಗೆಗೋಸ್ಕರ ಕೆಲಸ ಮಾಡುತ್ತಿದೆ. ಹಿಂದಿನ ಅಧ್ಯಯನದಲ್ಲಿ, ಈ ಸಂಸ್ಥೆಯ ಕಿರುಪರಿಚಯ ಹಾಗೂ ಉದ್ದೇಶಗಳಿಗನುಗುಣವಾಗಿ ಸಾಹಿತ್ಯ ಸಮೀಕ್ಷೆ ಮಾಡಿದ್ದು, ಈ ಅಧ್ಯಾಯದಲ್ಲಿ ಮೊದಲ ಹಂತದಲ್ಲಿ ಕೆಲವು ಪ್ರಮುಖ ಕಾರ್ಯಕ್ರಮಗಳ ವಿಶ್ಲೇಷಣೆ ಮಾಡಲಾಗುವುದು. ಎರಡೇ ಹಂತದಲ್ಲಿ ಸಿಒಡಿಪಿಯ ವಿದ್ಯಾರ್ಥಿ ಸಾಲಯೋಜನೆಯ ಸಾಧನೆಗಳ ಬಗ್ಗೆ ವಿಶ್ಲೇಷಿಸಿ ಯೋಜನೆಯ ಸಾಧಕ -ಬಾದಕಗಳ ಬಗ್ಗೆ ಚರ್ಚೆ ಮಾಡಲಾಗುವುದು.

### ಎ). ಕೆನರಾ ಅಭಿವೃದ್ಧಿ ಮತ್ತು ಶಾಂತಿ ಸಂಸ್ಥೆಯ ಯೋಜನೆಗಳ ವಿಶ್ಲೇಷಣೆ

ಸಿಒಡಿಪಿಯ ಹಲವು ಯೋಜನೆಗಳಲ್ಲಿ ಪ್ರಮುಖ ಯೋಜನೆಯಾದ ಮಹಿಳಾ ಸಬಲೀಕರಣ, ಎಂಡೋಸಲ್ಫಾನ್ ಪೀಡಿತರಿಗೋಸ್ಕರ ಕಾರ್ಯಕ್ರಮಗಳು, ಸ್ವಸಹಾಯ ಗುಂಪುಗಳು ಹಾಗೂ ಮಳೆಕೊಯ್ಲಿನ ಬಗ್ಗೆ ಈ ಅಧ್ಯಾಯದಲ್ಲಿ ಚರ್ಚಿಸಲಾಗುವುದು.

### ೧. ಮಹಿಳಾ ಸಬಲೀಕರಣ

ನಮ್ಮ ಸಮಾಜದಲ್ಲಿ ಮಹಿಳೆಯರಿಗೆ ಕೆಲವು ಮಿತಿಗಳಿವೆ. ಅವರಿಗೆ ಸ್ವತಂತ್ರವಾಗಿ ತಮ್ಮ ಇಷ್ಟದ ಉದ್ಯೋಗ ಹಾಗೂ ಕೆಲಸ ಕಾರ್ಯಗಳನ್ನು ಮಾಡಲು ಇಂದಿಗೂ ಸಾಧ್ಯವಿಲ್ಲ. ಆದ್ದರಿಂದ ಸಿಒಡಿಪಿಯು ಮಹಿಳೆಯರು ತಮ್ಮ ವೈಯಕ್ತಿಕ ಮಿತಿಗಳಿಂದ ಹೊರಬಂದು ಸ್ವತಂತ್ರ ನಿರ್ಧಾರವನ್ನು ತೆಗೆದುಕೊಳ್ಳಲು, ನಿರಂತರ ತರಬೇತಿ, ಆರ್ಥಿಕ ಬಲ, ಪಾಲುಗೊಳ್ಳುವಿಕೆ, ರಾಜಕೀಯ ಜಾಗೃತಿ, ಹಕ್ಕುಗಳ ಬಗ್ಗೆ ಜಾಗೃತಿ ನೀಡಿ ಅವರು ಸಶಕ್ತರಾಗುವಂತೆ ಮಾಡುತ್ತದೆ.

ಮಹಿಳಾ ಸಬಲೀಕರಣಕ್ಕೆ ಸಿಒಡಿಪಿಯು ಹಮ್ಮಿಕೊಂಡಿರುವ ಕಾರ್ಯಕ್ರಮಗಳು

- ಪಂಚಾಯತ್ ರಾಜ್ ಬಗ್ಗೆ ತರಬೇತಿ

- ಮಹಿಳಾ ಹಕ್ಕಿನ ಬಗ್ಗೆ ಜಾಗೃತಿ
- ಹೆಣ್ಣು ಭ್ರೂಣದ ರಕ್ಷಣೆ ಹಾಗೂ ಸರಕಾರದ ಯೋಜನೆಗಳ ಬಗ್ಗೆ ಮಾಹಿತಿ ತರಬೇತಿ.
- ಮಹಿಳೆಯರಿಗೆ ವಕಾಲತು ಮತ್ತು ಮಧ್ಯಸ್ಥಿಕೆಯನ್ನು ಒದಗಿಸುವುದು
- ಸಂಪರ್ಕ ಮತ್ತು ಜಾಲಬಂಧದ ಬಗ್ಗೆ ಮಾಹಿತಿ ಹಾಗೂ ತರಬೇತಿ
- ಮಹಿಳಾ ನಾಯಕತ್ವ, ಸಂವಹನ ಕಲೆ, ನಿರ್ಧಾರ ಪ್ರಕ್ರಿಯೆ ಬಗ್ಗೆ ಅರಿವು ಹಾಗೂ ತರಬೇತಿಯನ್ನು ನೀಡುವುದು.
- ಸಣ್ಣ ಉದ್ದಿಮೆ ಬಗ್ಗೆ ಅರಿವು
- ರಾಜಕೀಯ ಜಾಗೃತಿಯ ಬಗ್ಗೆ ಅರಿವು
- ಲಿಂಗ ಸಮಾನತೆ ಬಗ್ಗೆ ಅರಿವು
- ಕೌಟುಂಬಿಕ ಹಿಂಸೆಯ ಬಗ್ಗೆಯ ಅರಿವು
- ಮಹಿಳಾ ಆರೋಗ್ಯದ ಬಗ್ಗೆ ತಿಳುವಳಿಕೆ, ಆಪ್ತ ಸಮಾಲೋಚನಾ ಕಾರ್ಯಕ್ರಮಗಳನ್ನು ನೀಡಲಾಗುತ್ತಿದೆ.

**ಕಾರ್ಯಕ್ರಮಗಳ ವಿಶ್ಲೇಷಣೆ**

ಸರ್ಕಾರೇತರ ಸಂಘ 'ಕೆನರ ಅಭಿವೃದ್ಧಿ ಮತ್ತು ಶಾಂತಿ ಸಂಸ್ಥೆ' ತನ್ನ ಯೋಜನೆಗಳನ್ನು ಜನರಿಗೆ ತಲುಪಿಸಲು ಸ್ವಸಹಾಯ ಗುಂಪುಗಳನ್ನು ಬಳಸುತ್ತಿದೆ. ಈ ಸ್ವಸಹಾಯ ಗುಂಪಿನಲ್ಲಿ ಮಹಿಳಾ ಸಬಲೀಕರಣದ ವಿವಿಧ ಯೋಜನೆಗಳನ್ನು ಜಾರಿಗೆ ತರುತ್ತಿದೆ. ತನ್ನ ಕಾರ್ಯಕರ್ತರನ್ನು ವಿವಿಧ ಸ್ವಸಹಾಯ ಗುಂಪುಗಳಿಗೆ ಕಳುಹಿಸಿ ಅವರಿಗೆ ತರಬೇತಿ ಹಾಗೂ ಪ್ರೋತ್ಸಾಹ ನೀಡುತ್ತಿದೆ.

ಮಹಿಳಾ ಸಬಲೀಕರಣವನ್ನು ಈ ಸ್ವಸಹಾಯ ಗುಂಪಿನೊಂದಿಗೆ ಸಿಒಡಿಪಿ ಹೇಗೆ ಮಾಡುತ್ತಿದೆ ಎಂಬುದನ್ನು ಒಂದು ಕೇಸ್ ಸ್ಟಡಿಯೊಂದಿಗೆ ಚರ್ಚಿಸಲಾಗಿದೆ.

೧. ಕಾಸರಗೋಡು ಜಿಲ್ಲೆಯ, ಮಂಜೇಶ್ವರ ತಾಲೂಕಿನ ಮಂಜೇಶ್ವರ ಗ್ರಾಮ ಪಂಚಾಯಿತಿ ವ್ಯಾಪ್ತಿಯ ಗೇರುಕಟ್ಟೆ ಎಂಬಲ್ಲಿರುವ 'ಹರ್ಷ' ಎಂಬ ಸ್ವಸಹಾಯದ ಸದಸ್ಯೆ ನೇಬಿಸಾ ಎಂಬುವರು ಆಡುಸಾಕಣೆಯಿಂದ ತನ್ನ ದೈನಂದಿನ ಜೀವನ ಮಟ್ಟವನ್ನು ಸುಧಾರಿಸಿದ್ದಾರೆ. ಕಡುಬಡತನದಿಂದ ಜೀವನ ಸಾಗುತ್ತಿದ್ದ ನೆಬೀಸಾರವರಿಗೆ ನಾಲ್ಕು ಜನ ಮಕ್ಕಳು ಹಾಗೂ ಕೆಲಸ ಮಾಡಲು ಅಶಕ್ತರಾದ ಗಂಡ ಮನೆಯಲ್ಲಿದ್ದು, ತನ್ನ ಜೀವನದ ಖರ್ಚಿಗೋಸ್ಕರ ಗೇರುಬೀಜ ಕಾರ್ಖಾನೆಯಲ್ಲಿ ಕೆಲಸ ಮಾಡುತ್ತಿದ್ದರು. ಸ್ವ ಸಹಾಯದ ಮೂಲಕ ಸ್ವ ಉದ್ಯೋಗದ ಮಾಹಿತಿ ಪಡೆದು ಅವರ ಪ್ರೋತ್ಸಾಹದಿಂದ ಪಾವೂರು ಕೇರಳ ಗ್ರಾಮೀಣ ಬ್ಯಾಂಕಿನಿಂದ ಎರಡು ಲಕ್ಷ ಸಾಲವನ್ನು ಪಡೆದು ಆಡು ಸಾಕಣೆಯನ್ನು ಪ್ರಾರಂಭಿಸಿದರು. ಈ ಆಡುಸಾಕಣೆಯಿಂದ ದೊಡ್ಡ ಮಗಳ ಮದುವೆ ಮಾಡಿ ಉಳಿದ ಮಕ್ಕಳಿಗೆ ಶಿಕ್ಷಣವನ್ನು ನೀಡಿದ್ದಾರೆ. ಅವರ ಬ್ಯಾಂಕು ಸಾಲಕ್ಕೆ ಸರಕಾರ ಒಂದು ಲಕ್ಷ ಸಬ್ಸಿಡಿಯನ್ನು ನೀಡಿದೆ.

ಸಿಒಡಿಪಿಯ ಮಾರ್ಗದರ್ಶನ ಹಾಗೂ ಸ್ವಸಹಾಯದಿಂದ ನನಗೆ ತರಬೇತಿ ಸಿಕ್ಕಿ ಸ್ವಂತ ಉದ್ಯಮ ಮಾಡಲು ಸಾಧ್ಯವಾಯಿತು ಎಂದು ನೆಬೀಸಾ ಸಿಒಡಿಪಿಗೆ ಕೃತಜ್ಞತೆಯನ್ನು ಹೇಳಿದ್ದಾರೆ.

೨. ಮಂಗಳೂರು ಜಿಲ್ಲೆಯ ಬಂಟ್ವಾಳ ತಾಲೂಕಿನ ತೌಡುಗೋಳಿ ಎಂಬ ಹಳ್ಳಿಯ ಒಲ್ಗಾ ಎಂಬ ಮಹಿಳೆಯು ಬಹಳ ಕಷ್ಟದಿಂದ ಜೀವನ ನಡೆಸುತ್ತಿದ್ದರು. ಬೀಡಿಯ ಕೆಲಸ ಮಾಡುತ್ತಿದ್ದು ಅವರ ಗಂಡ ದಿನಕೂಲಿ ಕೆಲಸ ಮಾಡಿ ಮೂವರು ಮಕ್ಕಳನ್ನು ಕಷ್ಟದಿಂದ ಸಾಕುತ್ತಿದ್ದರು. 'ಜ್ಯೋತಿ' ಎಂಬ ಸ್ವಸಹಾಯ ಗುಂಪಿನ ಸದಸ್ಯರಾಗಿ ಸಿಒಡಿಪಿಯ ಕಾರ್ಯಕರ್ತರಿಂದ ಮಲ್ಲಿಗೆ ಕೃಷಿಯಲ್ಲಿ ತರಬೇತಿ ಪಡೆದರು. ಸ್ವಸಹಾಯ ಸಂಘದಿಂದ ೧೦,೦೦೦/– ಸಾಲಪಡೆದು ೫೦ ಮಲ್ಲಿಗೆ ಗಿಡಗಳನ್ನು ನೆಟ್ಟು ಈಗ ತಿಂಗಳಿಗೆ ರೂ.೨೦,೦೦೦/– ದುಡಿಯುತ್ತಿದ್ದಾರೆ. ಅವರು ಬಹಳ ಸಂತೋಷದಿಂದ ಸಿಒಡಿಪಿಗೆ ಋಣಿ ಎಂದು ಹೇಳಿಕೊಂಡಿದ್ದಾರೆ.

೩. ದ.ಕ. ಜಿಲ್ಲೆಯ ಮೊದಲ ಆಟೋ ರಿಕ್ಷಾ ಡ್ರೈವರ್ ಶ್ರೀಮತಿ ರಾಜೀವಿ ಸಿಒಡಿಪಿಯ ಸ್ವಸಹಾಯ ಗುಂಪಿಗೆ ಧನ್ಯವಾದಗಳನ್ನು ಹೇಳುತ್ತಾರೆ. ಶ್ರಿಮತಿ ರಾಜೀವಿಯ ಗಂಡ ಆಟೋ ರಿಕ್ಷಾ ಡ್ರೈವರ್ ದಂಪತಿಗಳಿಗೆ ಇಬ್ಬರು ಮಕ್ಕಳು. ಕಷ್ಟದಿಂದ ಜೀವನ ನಡೆಸುತ್ತಿದ್ದರು. ರಾಜೀವಿಯವರು ಸ್ವತಃ ಪ್ರೇರಣೆಯಿಂದ ತನ್ನ ಗಂಡನ ಮಾರ್ಗದರ್ಶನದಲ್ಲಿ ಆಟೋರಿಕ್ಷಾ ಚಾಲನೆಯನ್ನು ಕಲಿತರು. ಆದರೆ ರಾಜೀವಿಯವರ ಗಂಡ ಕೆಲವೇ ಸಮಯದಲ್ಲಿ ಕಾಯಿಲೆಗೆ ತುತ್ತಾಗಿ ಕೆಲಸ ಮಾಡದ ಸ್ಥಿತಿಗೆ ಬಂದರು. 'ಪ್ರೀತಿ' ಎಂಬ ಮೂಡಬಿದಿರೆಯ ಎಡಪದವಿನ ಸ್ವಸಹಾಯಕ್ಕೆ ಸೇರಿದ ರಾಜೀವಿಯವರು ಅವರ ಮಾರ್ಗದರ್ಶನ ಹಾಗೂ ಪ್ರೋತ್ಸಾಹದಿಂದ ಸ್ವಂತ ಆಟೋ ರಿಕ್ಷಾ ನಡೆಸಲು ಪ್ರಾರಂಭಿಸಿದರು. ಇಂದು ಅವರು ದಿನಕ್ಕೆ ೧೫೦೦/– ದುಡಿದು, ೬೦೦ ರೂಪಾಯಿ ಉಳಿತಾಯ ಮಾಡುತ್ತಾರೆ. ಸಿಒಡಿಪಿಯು ೨೦೧೬ರ ಮಹಿಳಾ ದಿನಾಚರಣೆಯಂದು ಅವರಿಗೆ ಸನ್ಮಾನಿಸಿದೆ.

ಹೀಗೆ ವಿವಿಧ ಕಾರ್ಯಕ್ರಮಗಳ ಮೂಲಕ ಮಹಿಳೆಯರಿಗೆ ಸ್ವಂತ ಉದ್ಯೋಗ ಹಾಗೂ ಅವರ ಹಕ್ಕುಗಳನ್ನು ಚಲಾಯಿಸಲು ಪ್ರೋತ್ಸಾಹಿಸುತ್ತದೆ.

**೨. ಎಂಡೋಸಲ್ಫಾನ್ ಪೀಡಿತರಿಗೆ ನೆರವು**

ಸಿಒಡಿಪಿಯು ಎಂಡೋಸಲ್ಫಾನ್ ಪೀಡಿತರನ್ನು ಸಮಾಜದ ಮುಖ್ಯವಾಹಿನಿಗೆ ತರಲು ವಿವಿಧ ಯೋಜನೆಗಳನ್ನು ಹಮ್ಮಿಕೊಂಡಿದೆ. ಕಾಸರಗೋಡು ತಾಲೂಕಿನ ಕಂಭಜೆ, ಎಮ್ಮಕಜೆ, ಕುಂಬ್ಳೆ ಮತ್ತು ಬದಿಯಡ್ಕ ಗ್ರಾಮಗಳಲ್ಲಿ ಎಂಡೋಸಲ್ಫಾನ್ ಪೀಡಿತರ ಆರೋಗ್ಯವನ್ನು ಸುಧಾರಿಸುವ ಹಾಗೂ ಸ್ವ ಉದ್ಯೋಗಕ್ಕೆ ಈ ಕೆಳಗಿನ ಕಾರ್ಯಕ್ರಮಗಳನ್ನು ಹಮ್ಮಿಕೊಂಡಿದೆ.

- ಸರಕಾರಿ ಯೋಜನೆಗಳ ಬಗ್ಗೆ ತರಬೇತಿ
- ರೈಟ್ ಟು ಸರ್ವೀಸ್ ಆಕ್ಟ್ ೨೦೧೨ ರ ಬಗ್ಗೆ ತರಬೇತಿ

- ಸ್ವಸಹಾಯ ಗುಂಪಿನ ಬಗ್ಗೆ ತರಬೇತಿ
- ಕೈತೋಟ, ಸಾವಯವ ಕೃಷಿ ಬಗ್ಗೆ ತರಬೇತಿ
- ಆಫೀಸು ವ್ಯವಹಾರಗಳ ಬಗ್ಗೆ ತರಬೇತಿ
- ಮಾನವ ಹಕ್ಕುಗಳ ಬಗ್ಗೆ ಜಾಗೃತಿ
- ನಾಯಕತ್ವದ ಬಗ್ಗೆ ತರಬೇತಿ

**ಕಾರ್ಯಕ್ರಮ ವಿಶ್ಲೇಷಣೆ**

ಎಂಡೋಸಲ್ಫಾನ್ ಪೀಡಿತರಿಗೆ ನೀಡುವ ನೆರವಿನ ಬಗ್ಗೆ ಕೇಸ್ ಸ್ಟಡಿ ಮೂಲಕ ಸಿಒಡಿಪಿಯ ಕಾರ್ಯಕ್ರಮದ ವಿಶ್ಲೇಷಣೆಯನ್ನು ಇಲ್ಲಿ ಮಾಡಲಾಗಿದೆ.

೧. ಕಾಸರಗೋಡಿನ ಎಮ್ಮಕಜೆ ಗ್ರಾಮದ ಭಾರತಿ ಎಂಬ ದಲಿತ ಮಹಿಳೆ ಎಂಡೋಸಲ್ಫಾನ್ ಪೀಡಿತರಾಗಿ ಮಹಿಳೆ ಬಹಳ ಬಡತನದಿಂದ ಜೀವನವನ್ನು ಸಾಗಿಸುತ್ತಿದ್ದರು. ಸಿಒಡಿಪಿಯು ನಡೆಸಿದ ಆರೋಗ್ಯ ಶಿಬಿರಕ್ಕೆ ಈ ದಲಿತ ಮಹಿಳೆಯು ಹಾಜರಾಗಿದ್ದು ಎಂಡೋಸಲ್ಫಾನ್‌ನಿಂದ ಅಂಗವಿಕಲತೆಯಾಗಿದ್ದಾರೆ ಎಂದು ವರದಿ ಮಾಡಲಾಯಿತು. ಭಾರತಿಯವರನ್ನು 'ದುರ್ಗಾಪರಮೇಶ್ವರಿ' ಎಂಬ ಸ್ವಸಹಾಯ ಗುಂಪಿನ ಸದಸ್ಯೆಯನ್ನಾಗಿ ಮಾಡಲಾಯಿತು. ಅಂತೆಯೇ ಸ್ವಸಹಾಯ ಗುಂಪಿನಲ್ಲಿ ಸರಕಾರಿ ಸೌಲಭ್ಯಗಳ ಮಾಹಿತಿ ನೀಡಿ ಸಮುದಾಯದ ಏಳಿಗೆಗೆ ಇತರ ನೆರವು ಹೇಗೆ ಸಿಗುತ್ತದೆ ಎಂಬ ಅರಿವನ್ನು ನೀಡಲಾಯಿತು. ಸ್ವಸಹಾಯದ ನೆರವಿನಿಂದ ಕಾಸರಗೋಡು ಜಿಲ್ಲಾ ಆಸ್ಪತ್ರೆಗೆ ಭಾರತಿಯವರನ್ನು ಭರ್ತಿಮಾಡಿ, ತಪಾಸಣೆ ನಡೆಸಿ ಜಿಲ್ಲಾ ವ್ಯವಸ್ಥಾಪಕರಿಂದ ಅಂಗವಿಕಲತೆ ಸರ್ಟಿಫಿಕೇಟ್ ಪಡೆದುಕೊಳ್ಳುವಂತೆ ಮಾಡಲಾಯಿತು. ಈ ಸರ್ಟಿಫಿಕೇಟ್‌ನಿಂದ ಎಮ್ಮಕಜೆ ಗ್ರಾಮ ಪಂಚಾಯತ್‌ನಿಂದ ಅಂಗವಿಕಲ ಪೆನ್ಷನ್ ಪಡೆಯಲು ಸಾಧ್ಯವಾಯಿತು ಎಂದು ಭಾರತಿಯವರು ಸಿಒಡಿಪಿಗೆ ಧನ್ಯವಾದವನ್ನು ಸಲ್ಲಿಸಿದ್ದಾರೆ.

೨. 'ಪ್ರೀತಿಜ್ಯೋತಿ' ಸ್ವಸಹಾಯ ಗುಂಪಿನ ಶ್ರೀಮತಿ ಕಾತ್ರಿನ್ ಮೊಂತೆರೋರವರ ಮಗ ಬುದ್ಧಿಮಾಂದ್ಯತೆಯಿಂದ ಬಳಲುತ್ತಿದ್ದು ಮಗನ ಆರೈಕೆಗೆ ಬಹಳ ಕಷ್ಟವಾಗಿತ್ತು. ಸಿಒಡಿಪಿಯ ಎಂಡೋಸಲ್ಫಾನ್ ಪೀಡಿತರ ಆರೋಗ್ಯ ಹಾಗೂ ಪುನರ್‌ವಸತಿ ಶಿಬಿರಕ್ಕೆ ಕಾತ್ರಿನ್ ಮೊಂತೆರೋ ಭೇಟಿ ನೀಡಿದಾಗ ಅವರಿಗೆ ತನ್ನ ಮಗನಿಗೆ ಸಹಾಯ ಸಿಗುವ ಭರವಸೆ ಸಿಕ್ಕಿತು. ಅಂತೆಯೇ ಸ್ವಸಹಾಯ ಗುಂಪಿನ ಸದಸ್ಯರು ಮನೆಗೆ ಭೇಟಿ ನೀಡಿ ಹೆಚ್ಚಿನ ಮಾಹಿತಿ ಪಡೆದರು. ಪಂಚಾಯತ್ ಕಾರ್ಯದರ್ಶಿಯರಲ್ಲಿ ಚರ್ಚಿಸಿ ಎಂಡೋಸಲ್ಫಾನ್ ಪೀಡಿತರರಿಗೆ ಸಿಗುವ ಸೌಲಭ್ಯವನ್ನು ಸಿಗಲು ಅವರ ಹೆಸರನ್ನು ನೋಂದಾಯಿಸಿದರು. ಮಾತ್ರವಲ್ಲ, ರೇಷನ್ ಕಾರ್ಡ್ ಎಪಿಎಲ್‌ನಿಂದ ಬಿಪಿಎಲ್‌ಗೆ ವರ್ಗಾಹಿಸಿದರು. ಇದರಿಂದ ಕಾತ್ರಿನ್ ಮೊಂತೆರೋ ತಿಂಗಳಿಗೆ ೨೦೦೦/- ಮಾಸಧನಪಡೆಯುವಂತೆ ಸಾಧ್ಯವಾಯಿತು ಎಂದು ಸಿಒಡಿಪಿ ಹಾಗೂ 'ದುರ್ಗಾಪರಮೇಶ್ವರಿ' ಸ್ವಸಹಾಯ ಗುಂಪಿಗೆ ಕೃತಜ್ಞತೆಯನ್ನು ಹೇಳುತ್ತಾರೆ.

೩. ಇದಲ್ಲದೆ, ಸ್ವಸಹಾಯ ಗುಂಪಿನ ಸಹಾಯದಿಂದ ಸಿಸ್ಟಮ್ ಆಫ್ ರೈಸ್ ಇಂಟೆಸಿಫಿಕೇಶನ್ ಬಗ್ಗೆ ಜಾಗೃತಿ ಮೂಡಿಸಿ ಭತ್ತದ ಕೃಷಿಯನ್ನು ಕಡಿಮೆ ನೀರಾವರಿ ಹಾಗೂ ಕಾರ್ಮಿಕರಿಂದ ಬೆಳೆದು ಉತ್ತಮ ಇಳುವರಿಯನ್ನು ಹೇಗೆ ಪಡೆಯಬಹುದು ಎಂಬ ಬಗ್ಗೆ ಜಾಗೃತಿ ಮೂಡಿಸಿ ತರಬೇತಿ ನೀಡಿದೆ. ಸಿಒಡಿಪಿ ನಡೆಸಿದ ಈ ತರಬೇತಿ ಕಾರ್ಯಕ್ರಮದಿಂದ ೭ ಜನ ರೈತರು ಪ್ರಯೋಜನವನ್ನು ಪಡೆದಿದ್ದಾರೆ. ಇದು ಎಂಡೋಸಲ್ಫಾನ್ ಪೀಡಿತರಿಗೆ ಕೃಷಿಯನ್ನು ಮಾಡಲು ಬಹಳ ಅನುಕೂಲವಾಗಿದೆ.

ಸಿಒಡಿಪಿಯಿಂದ ಮಾರ್ಗದರ್ಶನ ಹಾಗೂ ಶಿಬಿರದ ಫಲವಾಗಿ ಕಳೆದ ವರ್ಷ ೭೪ ಮಂದಿಗೆ ಸರಕಾರದ ವಿವಿಧ ಸೌಲಭ್ಯ ಸಿಕ್ಕಿದೆ. ೭ ಜನರು ಎಂಡೋಸಲ್ಫಾನ್ ಸೌಲಭ್ಯಕ್ಕೆ ನೋಂದಣಿ ಪಡೆದಿದ್ದಾರೆ. ಇತ್ತೀಚಿನ ದಿನಗಳಲ್ಲಿ ನಿರಂತರ ತರಬೇತಿ ಕಾರ್ಯಕ್ರಮದಿಂದ ಇವರ ಸಂಖ್ಯೆ ಗಣನೀಯವಾಗಿ ಇಳಿದಿದೆ.

**೩. ಮಳೆಕೋಯ್ಲು**

ಮಂಗಳೂರು, ಉಡುಪಿ ಹಾಗೂ ಕಾಸರಗೋಡಿನ ಕರಾವಳಿಯಲ್ಲಿ ವರ್ಷವಾರು ಉತ್ತಮವಾದ ಮಳೆಯಾಗುತ್ತಿತ್ತು, ಈ ಮಳೆಯ ನೀರು ಪೋಲಾಗಿ ಕರಾವಳಿಯಲ್ಲಿ ನೀರಿನ ಕೃತಕ ಅಭಾವ ಸೃಷ್ಟಿಯಾಗಿವೆ. ಮಳೆಯ ನೀರಿನ ಸರಿಯಾದ ನಿರ್ವಹನೆ ಇಲ್ಲದೆ ಕುಡಿಯಲು ನೀರಿಲ್ಲದಾಗಿದೆ. ಅಲ್ಲದೆ ಕರಾವಳಿಯಲ್ಲಿ ವಿವಿಧ ಸಮಸ್ಯೆಗಳಾದ ಮಣ್ಣಿನ ಸವೆತ, ಉಪ್ಪುನೀರಿನ ಸಮಸ್ಯೆ, ಅರಣ್ಯನಾಶ, ಫಲವತ್ತಾದ ಮಣ್ಣಿನ ನಾಶ ಮುಂತಾದುವುಗಳಿಂದ ಜನರು ಕಂಗೆಟ್ಟಿದ್ದಾರೆ. ಆದ್ದರಿಂದ ಜನರಿಗೆ ಈ ಸಮಸ್ಯೆಗಳ ಅರಿವು ಮೂಡಬೇಕಿದ್ದು ವಿವಿಧ ಇಲಾಖೆಗಳ ಸಹಕಾರದಿಂದ ಸಿಒಡಿಪಿಯು ಮಳೆಕೋಯ್ಲಿನ ಬಗ್ಗೆ ಅರಿವು ಕಾರ್ಯಕ್ರಮಗಳನ್ನು ಆಯೋಜಿಸಿದೆ. ಮಾತ್ರವಲ್ಲದೆ ಅದನ್ನು ತಾಂತ್ರಿಕವಾಗಿ ಹಾಗೂ ವೈಜ್ಞಾನಿಕ ರೀತಿಯಲ್ಲಿ ಹೇಗೆ ಮಾಡಬಹುದು ಎಂಬುದನ್ನು ತರಬೇತಿ ಮುಖಾಂತರ ನಿರ್ವಹಿಸುತ್ತಿದೆ.

ಅಂತೆಯೇ, ಉಡುಪಿ ಜಿಲ್ಲೆಯ ಬೈಂದೂರು, ತಲ್ಲೂರು, ಕಾಸರಗೋಡಿನ ಮಿಯಾಪದವು ಹಾಗೂ ಮಂಗಳೂರಿನ ಮೂಡು ಪೆರಾರ ಗ್ರಾಮಗಳಲ್ಲಿ ಈ ಯೋಜನೆಯನ್ನು ಕೈಗೆತ್ತಿಕೊಂಡಿದೆ. ಈ ಗ್ರಾಮಗಳನ್ನು ಮಾದರಿ ಗ್ರಾಮಗಳಾಗಿ ಮಾಡಿ ಸಿಒಡಿಪಿ ತನ್ನ ಯೋಜನೆಯನ್ನು ಕಾರ್ಯಗತಗೊಳಿಸಿದೆ.

**ಯೋಜನೆಯ ಉದ್ದೇಶ**

೧. ಗಿಡಗಳನ್ನು /ಸಸಿಗಳನ್ನು ನೆಡುವುದು

೨. ಮಳೆಯ ನೀರನ್ನುಇಂಗಿಸಲು ಇಂಗು ಗುಂಡಿಯನ್ನು ತೋಡುವುದು ಹಾಗೂ

೩. ಮಳೆನೀರಿನ್ನು ಶೇಖರಿಸಿ ಕುಡಿಯಲು ಹಾಗೂ ಕೃಷಿಗೆ ವಿನಿಯೋಗಿಸುವುದು

೪. ಕಂಪೋಸ್ಟ್ ಗುಂಡಿಗಳನ್ನು ಮಾಡಿ, ಪ್ರಕೃತಿದಾಯಕವಾಗಿ ಗೊಬ್ಬರವನ್ನು ತಯಾರು ಮಾಡುವುದು.

**ಯೋಜನೆಯ ಉಪಯೋಗ**

೧. ಉಡುಪಿಯ ತಾಲ್ಲೂಕು ಹಾಗೂ ಮೀಂಜಾ ಗ್ರಾಮಗಳಲ್ಲಿ ೬೦ ಬಡರೈತರ ವಾರ್ಷಿಕ ವರಮಾನ ಎರಡರಷ್ಟು ಜಾಯ್ತಿಯಾಗಿದೆ.

೨. ೧೦೦ ಎಕರೆ ಬಂಜರು ಭೂಮಿಯನ್ನು ಕೃಷಿ ಭೂಮಿಯನ್ನಾಗಿ ಪರಿವರ್ತಿಸಲಾಗಿದೆ.

೩ ೩೦೦ ಎಕರೆ ಭೂಮಿಯಲ್ಲಿ ಗಿಡಗಳನ್ನು ನೆಟ್ಟು ಹಸಿರು ಕ್ರಾಂತಿಯನ್ನು ಮಾಡಿದೆ.

೪ ೧೪೦ ರೈತರಿಗೆ ಈ ಯೋಜನೆಯಿಂದ ಉತ್ತಮವಾದ ನೀರಾವರಿ ಸವಲತ್ತು ದೊರೆತಿದೆ.

೫ ೧೦೦ ರೈತರು ೫೦ ಮೀಟರ್ ಆಳದಲ್ಲಿ ಕುಡಿಯುವ ನೀರು ದೊರೆತಿದೆ.

**ತಾಲ್ಲೂಕು-ಗ್ರಾಮದಲ್ಲಿ ನಡೆಸಿದ ಕಾರ್ಯಕ್ರಮಗಳು**

| | | |
|---|---|---|
| ೧. | ಇಳಿಜಾರು ಪ್ರದೇಶದಲ್ಲಿ ತಡೆಗೋಡೆ ಕಟ್ಟುವಿಕೆ | –೨೪೬ ಎಕರೆ ಜಾಗದಲ್ಲಿ ಮಾಡಲಾಗಿದೆ |
| ೨. | ತೋಡಿನ ಹರಿಯುವ ನೀರಿಗೆ ಅಡ್ಡಕಟ್ಟುವಿಕೆ | – ೩೯ |
| ೩. | ಇಂಗು ಗುಂಡಿಗಳು | – ೪೪ |
| ೪. | ಗಿಡ ನೆಡುವಿಕೆ | – ೬೧ ಎಕರೆ ಜಾಗದಲ್ಲಿ ನೆಡಲಾಗಿದೆ. |
| ೫. | ಎರೆಹುಳ ಕಾಂಪೋಸ್ಟ್ ಗುಂಡಿ | – ೨೦ |
| ೬. | ಮಳೆನೀರು ಶೇಖರಣೆ ಟಾಂಕಿ | – ೧೫ |
| ೭. | ಸ್ವಸಹಾಯ ಗುಂಪು | – ೬ |

**ಸಿಒಡಿಪಿಯ ತರಬೇತಿ ಕಾರ್ಯಕ್ರಮ**

- ಯೋಜನೆಯ ಸ್ಥಳದಲ್ಲಿ ಸಿಬಂದಿಗೆ ಹಾಗೂ ಸಾರ್ವಜನಿಕರಿಗೆ ಮಳೆಕೊಯ್ಲಿನ ಬಗ್ಗೆ ತರಬೇತಿ ನೀಡಲಾಗಿದೆ.
- ಯೋಜನೆಯನ್ನು ಪ್ರಾರಂಭಿಸುವ ಮೊದಲು ಮನೆಗಳನ್ನು ಭೇತಿ ಮಾಡಿ ಯೋಜನೆಯ ಅವಶ್ಯಕತೆ ಹಾಗೂ ಅವರ ಬೇಡಿಕೆಯ ಬಗ್ಗೆ ಅವಲೋಕನ ಮಾಡಿದೆ.
- ಕೊಯಂಬುತ್ತೂರಿನಲ್ಲಿ ನಡೆದ ಮಳೆಕೋಯ್ಲಿನ ವಿಚಾರ – ಸಂಕೀರ್ಣಕ್ಕೆ ಸಿಒಡಿಪಿಯ ಸಿಬಂದಿಯ ಹಾಜರಾಗಿದ್ದಾರೆ.
- ಮಹಾರಾಷ್ಟ್ರದ ಅಹಮದ್‌ಬಾದ್‌ನಗರದಲ್ಲಿ ನಡೆದ ನೀರಿನ ಶೇಖರಣೆ ಬಗ್ಗೆಯ ವಿಚಾರ-ಸಂಕೀರ್ಣದಲ್ಲಿ ಸಿಒಡಿಪಿ ಸಿಬಂದಿಯು ಪಾಲುಗೊಂಡಿದ್ದಾರೆ.

**ಕಾರ್ಯಕ್ರಮ ವಿಶ್ಲೇಷಣೆ**

ಈ ಮಳೆಕೋಯ್ಲು ಯೋಜನೆಯ ಉಪಯೋಗ ಕೇವಲ ಯೋಜನೆ ಗ್ರಾಮಗಳಲ್ಲಿ ಮಾತ್ರವಲ್ಲದೆ ನೆರೆ ಊರ ಗ್ರಾಮಗಳಲ್ಲಿಯೂ ಸಹ ಪಸರಿಸಿದೆ.ಇಂಗು ಗುಂಡಿಗಳನ್ನು ಹಾಗೂ ಮಳೆನೀರಿನ

ಶೇಖರಣೆಯನ್ನು ಪ್ರೋತ್ಸಾಹಿಸಲು ಮಂಗಳೂರಿನ ಪೀಶರೀಸ್ ಕಾಲೇಜಿನ ನೆರವಿನಿಂದ ೪೫೦೦ ಕಾಟ್ಲಂ ಮೀನಿನ ಮರಿಗಳನ್ನು ಹೊಸಕೆರೆ, ಪೆಂಗನಿಕುಡ್ಲು ಹಾಗು ಉಪ್ಪಿನಕುದ್ರು ಕೆರೆಗಳಲ್ಲಿ ಹಾಕಲಾಗಿದೆ. ಎರೆಹುಳ ಗೊಬ್ಬರ ಗುಂಡಿಗಳನ್ನು ಪ್ರೋತ್ಸಾಹಿಸಲು ಕೃಷಿ ವಿಜ್ಞಾನ ಕೇಂದ್ರದ ೪೮೦೦ ಎರೆಹುಳಗಳನ್ನು ಮಳೆಕೋಯ್ಲು ಫಲಾನುಭವಿಗಳಿಗೆ ಹಂಚಲಾಗಿದೆ. ೪೭೦ ಮಲ್ಲಿಗೆ ಗಿಡಗಳನ್ನು ಈ ಯೋಜನೆಯ ಗ್ರಾಮಗಳ ೭೨ ಕುಟುಂಬದವರಿಗೆ ಹಂಚಲಾಗಿದೆ.

ಸಿಒಡಿಪಿಯು ಇಷ್ಟೆಲ್ಲಾ ಪ್ರೋತ್ಸಾಹಿಸುವಾಗ ಮಳೆಕೋಯ್ಲಿನ, ಇಂಗು ಗುಂಡಿಗಳನ್ನು ತೆಗೆಯಲು ಕೆಲವರು ಹಿಂದು–ಮುಂದು ಮಾಡಿದ್ದಾರೆ ಎಂದು ಸಿಒಡಿಪಿಯು ಮಾಹಿತಿ ನೀಡಿದೆ. ನೀರಿನ ಟ್ಯಾಂಕುಗಳನ್ನು ನಿರ್ಮಿಸಲು ಬ್ಯಾಂಕಿನಿಂದ ಸಾಲವನ್ನು ಪಡೆಯಲು ಕೆಲವರಿಗೆ ಕಷ್ಟವಾಗಿದೆ. ಇನ್ನು ಕೆಲವರಿಗೆ ಸಾಲವನ್ನು ನೀಡಲು ಬ್ಯಾಂಕಿನವರು ಅನಗತ್ಯ ಸಮಯವನ್ನು ವ್ಯಯಿಸಿದ್ದಾರೆ ಎಂದು ಮಾಹಿತಿ ಇದೆ.

**ಈ ಯೋಜನೆಯಿಂದ ಮಾಡಿದ ಸಾಧನೆ**

- ನೀರನ್ನು ಶೇಖರಿಸಲು ಜನರಲ್ಲಿ ಅರಿವು ಮೂಡಿಸಿದೆ.
- ಸ್ವಯಂಸೇವಕರಾಗಿ ಈ ಯೋಜನೆಗೆ ತಮ್ಮ ಪಾಲನ್ನು ಜನರು ನೀಡಿದ್ದಾರೆ.
- ಸ್ಥಳೀಯ ಪ್ರಕೃತಿಯ ೫೦% ಹಸಿರು ಈ ಯೋಜನೆಯಿಂದ ಜಾಸ್ತಿಯಾಗಿದೆ.
- ಮಳೆನೀರಿನ ಶೇಖರನೆಯಿಂದ ಕುಡಿಯಲು ನೀರಿನ ಅಭಿವೃದ್ಧಿಯಾಗಿ ಜನರಿಗೆ ಅನುಕೂಲವಾಗಿದೆ.
- ಇಳಿಜಾರು ಭೂಮಿಯಲ್ಲಿ ಅಡ್ಡಗೋಡೆ ಹಾಗೂ ಇಂಗು ಗುಂಡಿಯಿಂದ ಯೋಜನೆಯ ಭಾಗದ ಭೂಮಿಯ ನೀರಾವರಿ ಮಟ್ಟದಲ್ಲಿ ಸುಧಾರಣೆಯಾಗಿದೆ. ಬಾವಿಗಳಲ್ಲಿ ನೀರಿನ ಪ್ರಮಾಣ ಏರಿಕೆಯಾಗಿದೆ.
- ತೋಟಗಾರಿಕೆ ಇಲಾಖೆ ೫೦ ಗಿಡಗಳನ್ನು ನೆಟ್ಟವರಿಗೆ ೫,೦೦೦/– ಸಹಾಯಧನ ನೀಡಿದೆ.
- ಎರೆಹುಳು ಗೊಬ್ಬರದಿಂದ ರೈತರ ಬೆಳೆಯಲ್ಲಿ ಗುಣಮಟ್ಟ ಜಾಸ್ತಿಯಾಗಿದೆ.

ಸಿಒಡಿಪಿಯ ಈ ಯೋಜನೆಯನ್ನು ಮಾನೊಸ್ ಲೂನಿದಾಸ್ ಎಂಬ ಸಂಸ್ಥೆಯ ಹಣಕಾಸು ನೆರವಿನಿಂದ ಮಾಡಲಾಗಿದೆ. ಈ ಯೋಜನೆಯಿಂದ ಹಲವಾರು ಗ್ರಾಮಗಳಿಗೆ ಪ್ರಯೋಜನವಾಗಿದೆ.

**೪. ಸ್ವ ಉದ್ಯೋಗ ತರಬೇತಿ ಯೋಜನೆ**

ಕ್ರಿಶ್ಚಿಯನ್ ಸಮುದಾಯದ ಅಲ್ಪಸಂಖ್ಯಾತ ಸರ್ಕಾರೇತರ ಸಂಸ್ಥೆ ಸಿಒಡಿಪಿಯ ಪ್ರಮುಖ ಯೋಜನೆಯಾದ ಸ್ವ ಉದ್ಯೋಗ ತರಬೇತಿ ಯೋಜನೆಗೆ ಮಂಗಳೂರು ಪರಿಸರದಲ್ಲಿ ಮನೆಮಾತಾಗಿದೆ. ನಿರುದ್ಯೋಗಿ ಗ್ರಾಮೀಣ ಹಾಗೂ ಪಟ್ಟಣದ ಯುವಜನರಿಗೆ ಈ ಯೋಜನೆ ವರದಾನವಾಗಿದೆ. ಶಿಕ್ಷಣವನ್ನು ವಿವಿಧ ಕಾರಣಗೋಸ್ಕರ ಮೊಟಕುಗೊಳಿಸಿ ನಿರುದ್ಯೋಗಿಯಾದ ಯುವಜನರಿಗೆ ತನ್ನ ಕಾಲಿನ ಮೇಲೆ ನಿಲ್ಲುವಂತೆ ಮಾಡಲು ಅವರಿಗೆ ಸಿಒಡಿಪಿಯು ತರಬೇತಿ

ನೀಡುತ್ತಿದೆ. ಈ ತರಬೇತಿ ಯೋಜನೆಯನ್ನು ಸಿಒಡಿಪಿಯು 1982 ರಲ್ಲಿ ಪ್ರಾರಂಭಿಸಿವೆ.

**ಈ ಯೋಜನೆಯ ಉದ್ದೇಶಗಳು**

- ಗ್ರಾಮೀಣ ಯುವಜನರನ್ನು ಸ್ವ ಉದ್ಯೋಗಕ್ಕೋಸ್ಕರ ಕೌಸಲ್ಯಗಳನ್ನು ಕಲಿಸುವುದು
- ಯುವ ಜನರ ಇಚ್ಛೆಯ ತಾಂತ್ರಿಕ ತರಬೇತಿಯನ್ನು ನೀಡುವುದು.
- ಬ್ಯಾಂಕ್ ಸಾಲದ ಸೌಲಭ್ಯವನ್ನು ಸಿಗುವಂತೆ ಮಾಡುವುದು ಹಾಗೂ ಸರಕಾರಿ ಯೋಜನೆಗಳ ಫಲಾನುಭವಿಗಳಾಗುವಂತೆ ಪ್ರೇರೆಪಿಸುವುದು.
- ಗ್ರಾಮೀಣ ಯುವಜನರನ್ನು ಬದಲಾವಣೆಯ ಏಜೆಂಟರಾಗಿ ರೂಪಿಸುವುದು.

**ಸಾಧನೆಗಳ ಪರಿಶೀಲನೆ**

- ೨೩೨೭ ಮಂದಿ ಯುವಜನರು ಅವರ ಇಚ್ಛೆಯ ೫೦ ನಮೂನೆಯ ತಾಂತ್ರಿಕ ಶಿಕ್ಷಣವನ್ನು ಪಡೆದಿದ್ದಾರೆ.
- ೬೦% ಯುವಜನರು ಸ್ವ ಉದ್ಯೋಗವನ್ನು ಮಾಡುತ್ತಿದ್ದಾರೆ.
- ಈ ತಾಂತ್ರಿಕ ಶಾಲೆಯು ಭಾರತ ಸರಕಾರದ Modular Employable Skills Scheme ಅಡಿ ತರಬೇತಿ ನೀಡುವ ಸಂಸ್ಥೆಯೆಂದು ನೋಂದಾಯಿಸಲ್ಪಟ್ಟಿದೆ.
- ಅಂತೆಯೇ, ೭೧ ಯುವಜನರು ಈ MES ಶಿಕ್ಷಣದ ತರಬೇತಿಯನ್ನು ಪಡೆದಿದ್ದಾರೆ.

ಸಿಒಡಿಪಿಯು ಈ ಕೆಳಗಿನ ತಾಂತ್ರಿಕ ಶಿಕ್ಷಣವನ್ನು ನೀಡುತ್ತಿದೆ.

ಹೊಲಿಗೆ ತರಬೇತಿ, ಪಂಪ್ ದುರಸ್ತಿ, ದ್ವಿಚಕ್ರ, ರೇಡಿಯೋ, ಟಿ.ವಿ.ರಿಪೇರಿ, ಸೈಕಲ್ ದುರಸ್ತಿ, ಇಲೆಕ್ಟ್ರಿಶಿಯನ್, ಅಲ್ಯೂಮಿನಿಯಂ ಫ್ಯಾಬ್ರಿಕೇಷನ್, ವೈರ್ ನಿಟ್ಟಿಂಗ್, ಮೋಟಾರ್ ವೈಂಡಿಗ್, ಬೇಕರಿ, ಆಟೋ ಇಲೆಕ್ಟ್ರಿಷಿಯನ್, ಮರದ ಕೆಲಸ, ಗ್ಯಾಸ್ ವೆಲ್ಡಿಂಗ್, ಫೋಟೋಗ್ರಫಿ, ರೆಫ್ರಿಜರೇಷನ್, ಪೈಂಟಿಂಗ್, ಪ್ರಿಂಟಿಂಗ್ ಪ್ರೆಸ್, ನಾರಿನ ಉತ್ಪನ್ನಗಳು, ಡಿಸೇಲ್ ಮೆಕಾನಿಕ್, ಬೆತ್ತದ ಸಾಮಾಗ್ರಿ,ಟೈರ್ ಪ್ಯಾಚ್, ಸಾಬೂನ್ ತಯಾರಿ, ಧ್ವನಿ ವರ್ಧಕ, ಚಮ್ಮರ, ಸೋಡಾ ತಯಾರಿ, ಸೋಡಾ ಕಮ್ ಬೆಡ್ ತಯಾರಿ, ಆಯಿಲ್ ಮಿಲ್ಸ್, ಸುಣ್ಣ ತಯಾರಿ, ಪಶು ಆಹಾರ ತಯಾರಿ, ಆಹಾರೋತ್ಪನ್ನಗಳ ತಯಾರಿ, ಕ್ಷೌರಿಕ, ಸೀಟ್ ಕುಶನ್, ಗಾರೆ ಕೆಲಸ, ಕಮರ್ಷಿಯಲ್ ಆರ್ಟ್ಸ್, ವಾಚ್ ರಿಪೇರಿ, ಕಮ್ಮಾರ, ಸ್ಕ್ರೀನ್ ಪ್ರಿಂಟಿಂಗ್, ಟಿನ್‌ಮೇಕರ್, ಗಣಕಯಂತ್ರ ರಿಪೇರಿ ಇತ್ಯಾದಿ ತಾಂತ್ರಿಕ ಶಿಕ್ಷಣವನ್ನು ಸಿಒಡಿಪಿಯು ನೀಡುತ್ತಿದೆ.

**ಕೇಸ್ ಸ್ಟಡಿ:** ೧. ಬೆಳ್ತಂಗಡಿ ತಾಲೂಕಿನ ನಾರಾವಿಯ ಸುರೇಶ್ ಪೂಜಾರಿ ಎಸ್‌ಎಸ್‌ಎಲ್‌ಸಿ ಶಿಕ್ಷಣದ ನಂತರ ಶಿಕ್ಷಣವನ್ನು ಅರ್ಧದಲ್ಲೇ ಮೊಟಕುಗೊಳಿಸಿ ತನ್ನ ಬಡಕುಟುಂಬಕ್ಕೆ ನೆರವು ಮಾಡಲು ಪ್ರಾರಂಭಿಸಿದರು. ತಂದೆ ಕೂಲಿ ಕಾರ್ಮಿಕರು ತಾಯಿ ಬೀಡಿ ಕಟ್ಟುತ್ತಿದ್ದರು. ಅವರ ಸಂಪಾದನೆ ಅವರ ದೈನಂದಿನ ಜೀವನಕ್ಕೆ ಸಾಕಾಗುತ್ತಿರಲಿಲ್ಲ. ೨೦೦೬-೨೦೦೭ ರ ಸಿಒಡಿಪಿಯ

ಸ್ವ ಉದ್ಯೋಗಿ ತರಬೇತಿ ಪಡೆದ ಒಬ್ಬನಿಂದ ಸುರೇಶ್ ಪೂಜಾರಿಗೆ ಮಾಹಿತಿ ಲಭಿಸಿ ಅಂತೆಯೇ ಇಲೆಕ್ಟ್ರಿಕಲ್ ಮೋಟಾರ್ ವೈಂಡಿಂಗ್ ತರಬೇತಿಗೆ ಹೆಸರು ನೋಂದಾಯಿಸಿದರು. ಈ ಸಂಸ್ಥೆಯಲ್ಲಿ ತರಬೇತಿ ಪಡೆದು ಕೆಲಸದಲ್ಲಿ ಪ್ರಗತಿಯನ್ನು ಪಡೆದರು. ನೇತ್ರಾವತಿ ಗ್ರಾಮೀಣ ಬ್ಯಾಂಕಿನಿಂದ ರೂ. ೧೫೦೦೦/- ಸಾಲ ಪಡೆದು ಯಂತ್ರೋಪಕರಣಗಳ ಸಾಮಾಗ್ರಿಯನ್ನು ಖರೀದಿ ಮಾಡಿ ತನ್ನ ಸ್ವಂತ ಅಂಗಡಿ ಶ್ರೀ ತುಲಸಿ ಸೌಂಡ್ಸ್ ಎಂಡ್ ವೈಂಡಿಂಗ್ ನನ್ನ ಪ್ರಾರಂಭಿಸಿದರು. ತನ್ನ ಕೆಲಸ ಮತ್ತು ಉತ್ತಮ ಸಂಬಂಧಕ್ಕೆ ಹೆಸರುವಾಸಿಯಾದ ಸುರೇಶ್ ಪೂಜಾರಿ ತಿಂಗಳಿಗೆ ೧೨೦೦೦/- ದುಡಿಯುತ್ತಿದ್ದಾರೆ. ಸಿಒಡಿಪಿಗೆ ಅವರು ಕೃತಜ್ಞತೆಯನ್ನು ಸಲ್ಲಿಸಿದ್ದಾರೆ.

೨. ಬೆಳ್ತಂಗಡಿ ತಾಲೂಕಿನ ಪುಂಜಲ್‌ಕಟ್ಟೆಯ ಅಶೋಕ್ ಎಂಬುವರು ಬಡಕುಟುಂಬದವರು ತಾಯಿ ಬೀಡಿ ಕಟ್ಟುತ್ತಿತ್ತು ತನ್ನ ಕುಟುಂಬದ ದೈನಂದಿನ ಖರ್ಚಿಗಾಗಿ ಹಣ ಹೊಂದಲು ಕಷ್ಟಪಡುತ್ತಿದ್ದರು. ದ್ವಿಚಕ್ರ ಮೆಕ್ಯಾನಿಕ್ ಆಗುವ ಆಶೆ ಅಶೋಕ್‌ಗೆ ಇತ್ತು. ಆದರೂ ಹಣದ ಕೊರತೆಯಿಂದ ತನ್ನ ಶಿಕ್ಷಣವನ್ನು ಎಸ್‌ಎಸ್‌ಎಲ್‌ಸಿಯಲ್ಲಿ ಮೊಟಕುಗೊಳಿಸಿದರು. ಸಿಒಡಿಪಿಯ ಸ್ವ ಉದ್ಯೋಗ ತರಬೇತಿ ಯೋಜನೆಗೆ ೫೭ನೇ ಬ್ಯಾಚಿನ ತರಬೇತಿಗಾಗಿ ಹೆಸರನ್ನು ನೋಂದಾಯಿಸಿದರು. ತರಬೇತಿ ಹೊಂದಿ ಈಗ ಹೆಚ್ಚಿನ ತರಬೇತಿಗಾಗಿ ಬೆಳ್ತಂಗಡಿಯ ಮಂಜುನಾಥ್ ಆಟೋ ವರ್ಕ್ಸ್‌ನಲ್ಲಿ ಕೆಲಸ ಮಾಡುತ್ತಿದ್ದಾರೆ. ಮನೆಯ ಜವಾಬ್ದಾರಿ ತೆಗೆದುಕೊಂಡ ಅಶೋಕ್ ಸಿಒಡಿಪಿಗೆ ಕೃತಜ್ಞತೆಯನ್ನು ಹೇಳುತ್ತಾರೆ.

೩. ಪ್ರಮೀಳಾ ಎನ್ನುವ ಬಡಕುಟುಂಬ ಮಹಿಳೆ ತನ್ನ ದೈನಂದಿನ ಖರ್ಚಿಗೆ ಕಷ್ಟಪಡುತ್ತಿದ್ದರು. ತೆಗೆದ ಸಾಲದ ಹೊರೆ ಅವರನ್ನು ಕಾಡುತ್ತಿತ್ತು. ಸ್ವಂತ ದುಡಿದು ಖರ್ಚಿಗೆ ಹಣ ಮಾಡಬೇಕೆಂದರೂ ಅವರಲ್ಲಿ ಕೌಶಲ್ಯದ ಅಭಾವವಿತ್ತು. ಸಿಒಡಿಪಿಯ ಸ್ವ ಉದ್ಯೋಗದ ಮಾಹಿತಿ ಪಡೆದು ೫೭ನೇ ಬ್ಯಾಚಿನ ಟೈಲರಿಂಗ್ ತರಬೇತಿಗೆ ಸೇರಿದರು. ಈಗ ಮನೆಯಲ್ಲಿ ಹೊಲಿಗೆಯ ಕೆಲಸ ಮಾಡುತ್ತಿದ್ದು ತನ್ನ ಜೀವನವು ಈಗ ಉತ್ತಮವಾಗಿ ಸಾಗುತ್ತಿದೆ ಎಂದು ಅವರು ಸಿಒಡಿಪಿಗೆ ಧನ್ಯವಾದ ಹೇಳುತ್ತಾರೆ.

ಸಿಒಡಿಪಿಯ ಈ ಯೋಜನೆಗೆ ಸಮಾಜದಲ್ಲಿ ಉತ್ತಮವಾದ ಸ್ಪಂದನೆ ದೊರೆತಿದೆ, ಸ್ವಂತ ಉದ್ದಿಮೆ ಮಾಡಲು ಅನುಕೂಲವಾಗಿದೆ. ಆದರೆ ಮಾಹಿತಿ ಕೊರತೆಯಿಂದ ತುಂಬ ಜನರು ಈ ಯೋಜನೆಯ ಫಲವನ್ನು ಪಡೆದಿಲ್ಲ. ಮಾಹಿತಿ ನೀಡಿದರೂ ಶಿಕ್ಷಣವನ್ನು ಅರ್ಧದಲ್ಲೇ ಮೊಟಕುಗೊಳಿಸಿದ ಯುವಕ-ಯುವತಿಯರು ಪುನಃ ಶಿಕ್ಷನವನ್ನು ಮುಂದುವರಿಸಲು ಅವರಿಗೆ ಪ್ರೇರಣೆ ಮತ್ತು ಪ್ರೋತ್ಸಾಹ ನೀಡಬೇಕಾಗಿದೆ. ಇದು ಬಹಳ ಕಡಿಮೆಯಾಗಿ ಅವರು ನಿರುದ್ಯೋಗಿಗಳಾಗಿ ಅಲೆದಾಡುತ್ತಾರೆ. ಅವರು ಸ್ವ ಸಹಾಯ ಗುಂಪಿನ ಮುಖಾಂತರ ಮಾಹಿತಿಯನ್ನು ಹಾಗೂ ಪ್ರೋತ್ಸಾಹವನ್ನು ನೀಡಬೇಕಾಗಿದೆ.

**ಬಿ. ಸಾಲಸೌಲಭ್ಯಯೋಜನೆಯಲ್ಲಿ ಸಿಒಡಿಪಿಯ ಸಾಧನೆಯ ಅಂಕಿ-ಅಂಶಗಳ ವಿಶ್ಲೇಷಣೆ**

'ಕೆನರ ಅಭಿವೃದ್ಧಿ ಮತ್ತು ಶಾಂತಿ ಸಂಸ್ಥೆ' ತನ್ನ ಅಸ್ತಿತ್ವದಿಂದಲೇ ಬಡ ವಿದ್ಯಾರ್ಥಿಗಳಿಗೆ ಶಿಕ್ಷಣವನ್ನು ಮುಂದುವರಿಸಲು ವಿವಿಧ ರೀತಿಯ ಹಣದ ನೆರವನ್ನು ನೀಡುತ್ತಾ ಬಂದಿದೆ. ೨೦೧೩ ರಿಂದ ಅಧಿಕೃತವಾಗಿ ವಿದ್ಯಾರ್ಥಿ ಸಾಲ ಯೋಜನೆ (ಎಡ್ಯೂಕೇರ್) ನ್ನು ಆರಂಭಿಸಿದೆ. ಈ ಯೋಜನೆಯ ಸಾಧನೆಗಳ ವಸ್ತುನಿಷ್ಠ ಅಧ್ಯಯನ ನಡೆಸಿ ಸಾಧಕ-ಭಾದಕಗಳನ್ನು ಚರ್ಚಿಸಲು ದಕ್ಷಿಣ ಕನ್ನಡ ಹಾಗೂ ಕಾಸರಗೋಡಿನ ೯೦ ವಿದ್ಯಾರ್ಥಿ ಫಲಾನುಭವಿಗಳನ್ನು ಪ್ರಶ್ನಾವಳಿಗಳ ಮೂಲಕ ಸಂದರ್ಶಿಸಿ ಮಾಹಿತಿ ಕಲೆ ಹಾಕಲಾಗಿದೆ. ಇದರೊಂದಿಗೆ ಕೆಲವು ಫಲಾನುಭವಿಗಳನ್ನು ಸಂದರ್ಶಿಸಿ ಕೇಸ್ ಸ್ಟಡಿ ಮಾಡಲಾಗಿದೆ.ಒಟ್ಟು ೯೦ ಮಂದಿಯಲ್ಲಿ ದಕ್ಷಿಣಕನ್ನಡ ಜಿಲ್ಲೆಯ ಗಂಡುಮಕ್ಕಳು ೨೬ (೨೮.೮೮%) ಹೆಣ್ಣುಮಕ್ಕಳು ೪೭ (೫೨.೨೨%) ಕಾಸರಗೋಡಿನ ಗಂಡುಮಕ್ಕಳು ೭ (೭.೭೭%) ಹೆಣ್ಣುಮಕ್ಕಳು ೧೦ (೧೧.೧೧%)ಗಳಾಗಿರುತ್ತಾರೆ. ಇವುಗಳ ಮಾಹಿತಿಯ ಬಗ್ಗೆ ಇಲ್ಲಿ ವಿಶ್ಲೇಷಣೆ ಮಾಡಲಾಗಿದೆ ಹಾಗೂ ಕೋಷ್ಟಕದ ಮಾಹಿತಿಯನ್ನು ವಿಶ್ಲೇಷಣೆಯ ಕೊನೆಗೆ ನೀಡಲಾಗಿದೆ.

**ಕೋಷ್ಟಕ-೧: ಮಾಹಿತಿದಾರ ವಿದ್ಯಾರ್ಹತೆಯ ವಿವರ**

ಒಟ್ಟು ೯೦ ಮಾಹಿತಿದಾರರಿಂದ ಮಾಹಿತಿಯನ್ನು ಪಡೆದಿದ್ದು ಅವರ ವಿವರ ಹೀಗಿದೆ.

ಬಿ. ಕಾಮ್‌ನ ೮ ಮಕ್ಕಳಲ್ಲಿ ೫ ಹೆಣ್ಣು ಹಾಗೂ ೩ ಗಂಡು ಮಕ್ಕಳು ೮.೮೮% ಒಟ್ಟು ಶೇಕಡಾ ಮಕ್ಕಳನ್ನು ಸಂದರ್ಶಿಸಿದೆ. ಬಿಸಿಎ ವಿಭಾಗದಲ್ಲಿ ೩ ಹೆಣ್ಣುಮಕ್ಕಳು ಹಾಗೂ ೨ ಗಂಡು ಮಕ್ಕಳನ್ನು ೫.೫೫% ಶೇಕಡಾ ಮಕ್ಕಳನ್ನು ಸಂದರ್ಶಿಸಿದೆ. ಬಿ.ಎಡ್‌ನ ೬ ಹೆಣ್ಣು ಹಾಗೂ ೪ ಗಂಡು ಮಕ್ಕಳನ್ನು ಸರಾಸರಿಯ ೧೧.೧೧% ಶೇಕಡಾ ಮಕ್ಕಳನ್ನು ಸಂದರ್ಶಿಸಿದೆ. ಬಿ.ಎ.ಯ ೩ ಹೆಣ್ಣು ಹಾಗು ೧ ಗಂಡು ಮಕ್ಕಳನ್ನು ಸರಾಸರಿಯ ೪.೪೪% ಸರಾಸರಿಯನ್ನು ಸಂದರ್ಶನ ಮಾಡಿದೆ. ಬಿಬಿಎಮ್‌ನ ೨ ಹೆಣ್ಣು ಹಾಗೂ ೧ ಗಂಡು ಮಕ್ಕಳನ್ನು ಸಂದರ್ಶಿಸಿ ಸರಾಸರಿ ೩.೩೩% ಶೇಕಡಾ ಮಕ್ಕಳನ್ನು ಸಂದರ್ಶನ ಮಾಡಿದೆ. ಬಿ.ಎಸ್.ಸಿಯ ೬ ಹೆಣ್ಣು ಹಾಗೂ ೩ ಗಂಡು ಮಕ್ಕಳನ್ನು ಸಂದರ್ಶಿಸಿದೆ. ನರ್ಸಿಂಗ್‌ನ ೧೦ ಹೆಣ್ಣು ಹಾಗೂ ೨ ಗಂಡು ಮಕ್ಕಳನ್ನು ಶೇಖಡಾ ೧೩.೩೩% ಸಂದರ್ಶಿಸಿದೆ. ಬಿಹೆಚ್‌ಎಮ್ ೩ ಗಂಡುಮಕ್ಕಳಿಂದ ಮಾಹಿತಿ ಪಡೆದಿದೆ. ಬಿಎಲ್‌ಎಲ್‌ಬಿಯಲ್ಲಿ ಕಲಿಯುತ್ತಿರುವ ಒಂದು ಹೆಣ್ಣು ಒಂದು ಗಂಡು (೨.೨೨%) ಮಕ್ಕಳಿಂದ ಮಾಹಿತಿ ಪಡೆದಿದೆ. ಎಮ್‌ಕಾಮ್ ಕಲಿಯುತ್ತಿರುವ ೮ ಹೆಣ್ಣುಮಕ್ಕಳ ಹಾಗೂ ೪ ಗಂಡು ಮಕ್ಕಳಿಂದ (೧೩.೩೩%) ಮಕ್ಕಳನ್ನು ಸಂದರ್ಶಿಸಿದೆ. ಎಮ್‌ಎಯ ೬ ಹೆಣ್ಣು ಮತ್ತು ೩ ಗಂಡು ಮಕ್ಕಳು (೧೦.೦೦%) ಮಕ್ಕಳಿಂದ ಮಾಹಿತಿ ಪಡೆಯಲಾಗಿದೆ. ಬಿಇಯ ೫ ಹೆಣ್ಣು ಹಾಗೂ ೫ ಗಂಡುಮಕ್ಕಳನ್ನು ಸಂದರ್ಶಿಸಿದೆ. ಎಮ್‌ಬಿಬಿಎಸ್‌ನ ೨ ಹೆಣ್ಣು ಮಕ್ಕಳು ಹಾಗೂ ೧ ಗಂಡು ಮಕ್ಕಳಿಂದ ಮಾಹಿತಿ ಪಡೆಯಲಾಗಿದೆ. ಹೀಗೆ ೯೦ ವಿದ್ಯಾರ್ಥಿಗಳಿಂದ ಪಡೆದ ೧೨ ವಿವಿಧ ಶೈಕ್ಷಣಿಕ ವಿದ್ಯಾರ್ಹತೆಯ ಮಾಹಿತಿಯನ್ನು ಪಡೆಯಲಾಗಿದೆ.

ಸಿಒಡಿಪಿಯು ವಿವಿಧ ವಿಷಯಕ್ಕೆ ಸಂಬಂಧಿಸಿದಂತೆ ನೀಡುವ ಸಾಲದ ಮಿತಿ ಹೀಗಿದೆ.

- ಇಂಜಿನಿಯರಿಂಗ್ – ೫೦,೦೧೦
- ಮೆಡಿಕಲ್ – ೧,೦೦,೦೦೦
- ಪ್ಯಾರಾ ಮೆಡಿಕಲ್ – ೫೦,೦೦೦
- ಸ್ನಾತಕೋತ್ತರ ಎಮ್.ಎ.
  ಎಮ್.ಕಾಮ್.ಎಲ್.ಎಲ್.ಬಿ.
  ಪತ್ರಿಕೋದ್ಯಮ ಇತ್ಯಾದಿ – ೩೦,೦೦೦
- ಬಿಎಡ್/ಬಿಎಸ್‌ಸಿ ನರ್ಸಿಂಗ್ ಇತ್ಯಾದಿ – ೩೦,೦೦೦
- ಸ್ನಾತಕ (ಬಿ.ಎ./ಬಿ.ಕಾಮ್) – ೨೦,೦೦೦

**ಕೋಷ್ಟಕ–೨:** ೨೦೧೬–೧೭ನೇ ವರ್ಷದಲ್ಲಿ ಸಿಒಡಿಪಿಯ ಸಾಲದಿಂದ ಪ್ರಯೋಜನ ಪಡೆದ ವಿದ್ಯಾರ್ಥಿಗಳ ವಿಶ್ಲೇಷಣೆ ಹೀಗಿದೆ: ೯೦ ಜನರ ಮಾಹಿತಿಯಲ್ಲಿ ಸ್ನಾತಕ ಪದವಿಯನ್ನು ಪಡೆಯಲು ೨೦೨ ವಿದ್ಯಾರ್ಥಿಗಳು ಪುನರ್‌ವರ್ತಿತ ಸಾಲವನ್ನು ಪಡೆದರೆ ಹೊಸತು ೧೫೦ ಜನ ವಿದ್ಯಾರ್ಥಿಗಳಿಗೆ ಲಭಿಸಿದೆ. ಸ್ನಾತಕೋತ್ತರ ಪದವಿಗೆ ಪುನರ್‌ವರ್ತಿತ ೯೪ ಮಂದಿ ವಿದ್ಯಾರ್ಥಿಗಳಿಗೆ ಸಾಲ ಲಭಿಸಿದರೆ ೧೪೩ ಮಂದಿ ಹೊಸ ವಿದ್ಯಾರ್ಥಿಗಳು ಸಾಲವನ್ನು ಪಡೆದುಕೊಂಡಿದ್ದಾರೆ. ಇಂಜಿನಿಯರಿಂಗ್ ಪದವಿ ಪಡೆಯಲು ಪುನರ್‌ವರ್ತಿತ ೧೮೫ ಮಂದಿ ವಿದ್ಯಾರ್ಥಿಗಳು ಸಾಲವನ್ನು ಪಡೆದಿದ್ದಾರೆ. ಆದರೆ, ೧೦೬ ಮಂದಿ ಹೊಸ ವಿದ್ಯಾರ್ಥಿಗಳು ಸಾಲವನ್ನು ಪಡೆದಿದ್ದಾರೆ. ನರ್ಸಿಂಗ್ ೭೯ ಮಂದಿ ಪುನರ್‌ವರ್ತಿಸಿ ಆದರೆ ೬೦ ಮಂದಿ ಹೊಸ ವಿದ್ಯಾರ್ಥಿಗಳು ಸಾಲ ಪಡೆದಿದ್ದಾರೆ. ಮೆಡಿಕಲ್ ೧೯ ಮಂದಿ ಪುನರ್‌ವರ್ತಿತ ಆದರೆ ೯ ಮಂದಿ ಹೊಸ ವಿದ್ಯಾರ್ಥಿಗಳು ಸಾಲ ಪಡೆದುಕೊಂಡಿದ್ದಾರೆ. ಡಿಪ್ಲೋಮ ೨೬ ಮಂದಿ ಪುನರ್‌ವರ್ತಿತ ವಿದ್ಯಾರ್ಥಿಗಳು ಆದರೆ, ೨೮ ಮಂದಿ ಹೊಸ ವಿದ್ಯಾರ್ಥಿಗಳು ಸಾಲವನ್ನು ಪಡೆದುಕೊಂಡಿದ್ದಾರೆ.

ಇವುಗಳಲ್ಲಿ ಪುನರ್‌ವರ್ತಿತ ಗಂಡುಮಕ್ಕಳ ಸಂಖ್ಯೆ ೨೭೩ ಆದರೆ ಹೆಣ್ಣುಮಕ್ಕಳು ೩೩೨ ಮಂದಿವಿರುತ್ತಾರೆ. ಹೊಸ ಸಾಲ ಪಡೆದ ಗಂಡುಮಕ್ಕಳು ೨೨೮, ಆದರೆ ಹೆಣ್ಣುಮಕ್ಕಳು ೨೬೮ ಆಗಿರುತ್ತಾರೆ. ೨೦೧೬–೧೭ ರ ಪುನರ್‌ವರ್ತಿತ ಒಟ್ಟು ಸಾಲ ೨,೫೭,೮೫,೫೦೦. ಆದರೆ ಹೊಸ ಸಾಲ ೨,೧೨,೨೨,೫೦೦ ಆಗಿ ಒಟ್ಟು ೨೦೧೬–೧೭ ರ ಸಾಲದ ಮೊತ್ತ ೪,೭೦,೦೮,೦೦೦ ಆಗಿರುತ್ತದೆ.

**ಕೋಷ್ಟಕ–೩:** ಸಾಲದ ಮಾಹಿತಿ

ಸಿಒಡಿಪಿಯ ಸಾಲದ ಮಾಹಿತಿ ಫಲಾನುಭವಿಗೆ ಈ ರೀತಿಯಲ್ಲಿ ಸಿಕ್ಕಿರುತ್ತದೆ. ೯೦ ಮಂದಿ ಮಾಹಿತಿದಾರರನ್ನು ಸಂದರ್ಶಿಸಿದಾಗ ಈ ರೀತಿಯ ವಿವರ ಲಭ್ಯವಾಗಿದೆ.

ಮಾಹಿತಿದಾರರು ಸಾಲದ ಮಾಹಿತಿಯ ಬಗ್ಗೆ ವಿವರವನ್ನು ಹೀಗೆ ನೀಡಿದ್ದಾರೆ. ಶೇಕಡಾ ೫೪.೪% ಜನರು ಚರ್ಚಿನ ಭಾನುವಾರದ ಪ್ರಕಟನೆಯಿಂದ ಸಿಒಡಿಪಿಯ ಸಾಲದ ಬಗ್ಗೆ ಮಾಹಿತಿ

ದೊರೆತಿದೆ ಎಂದಿದ್ದಾರೆ. ೨೩.೩% ಮಾಹಿತಿದಾರರು ಅವರು ಕಲಿಯುವ ಶಾಲಾ-ಕಾಲೇಜಿನಿಂದ ಮಾಹಿತಿ ಪಡೆದಿರುತ್ತಾರೆ ಎನ್ನುತ್ತಾರೆ. ಅಚಿದರೆ, ದಾಖಲಾತಿ ಸಮಯದಲ್ಲಿ ಕಾಲೇಜಿನ ಕಛೇರಿ ಹಾಗೂ ಪ್ರಾಂಶುಪಾಲರಿಂದ ಈ ಮಾಹಿತಿಯನ್ನು ಪಡೆಯಲಾಯಿತು ಎಂದಿದ್ದಾರೆ. ೭.೭% ವಿದ್ಯಾರ್ಥಿಗಳು ತಮ್ಮ ಕುಟುಂಬ ವರ್ಗದವರಿಂದ ಮಾಹಿತಿ ಪಡೆಯಲಾಯಿತು ಎಂದಿದ್ದಾರೆ. ಮಂಗಳೂರು ಧರ್ಮಕೇಂದ್ರದ ಅಧಿಕೃತ ಪತ್ರಿಕೆ ರಾಕ್ಣೊಂದಿಂದ ೨.೨% ಮಾಹಿತಿದಾರರು ಈ ಮಾಹಿತಿ ಪಡೆಯಲಾಯಿತು ಎಂದಿದ್ದಾರೆ.

ಸಿಒಡಿಪಿಯು ತನ್ನ ಸಾಲವನ್ನು ಸಮುದಾಯದ ವಿದ್ಯಾರ್ಥಿಗಳು ಪ್ರಯೋಜನ ಪಡೆಯಲು ಪತ್ರಿಕೆ ಭಾನುವಾರದ ಚರ್ಚಿನ ಪ್ರಕಟಣೆ, ಶಾಲಾ ಕಾಲೇಜುಗಳಲ್ಲಿ ಪ್ರಕಟಣೆ, ಕ್ಯಾಪ್ಸೆಲ್ ಅಧಿಕಾರಿಯ ಮುಖಾಂತರ ವಿದ್ಯಾರ್ಥಿಗಳಿಗೆ ಮಾಹಿತಿ, ಐಸಿವೈಎಂ, ವೈಸಿಎಸ್, ಕಥೋಲಿಕ್ ಸಭಾ ಮುಖಾಂತರ ತನ್ನ ಯೋಜನೆಯ ಮಾಹಿತಿಯನ್ನು ನೀಡುತ್ತಿದೆ.

**ಕೇಸ್ ಸ್ಟಡಿ**

ಬಂಟ್ವಾಳ ತಾಲೂಕಿನ ಕಳ್ಳಿಗೆ ನಿವಾಸಿ ಶ್ರೀ ವಿಲಿಯಮ್ ಡಿಸೋಜಾರವರ ಮಗನಾದ ಆ್ಯಲನ್ ವಿಲ್‌ಸ್ವನ್ ಡಿಸೋಜರವರಿಗೆ ಬಿ.ಇ. ಕಲಿಯುವ ಆಶೆವಿದ್ದರೂ ಬಡ ರೈತನದ ತಂದೆಗೆ ಈ ವಿದ್ಯೆ ಕೊಡಲು ಸಾಧ್ಯವಿರಲಿಲ್ಲ. ಚರ್ಚಿನ ಭಾನುವಾರದ ಪ್ರಕಟಣೆಯಿಂದ ಸಿಒಡಿಪಿಯ ಸಾಲದ ಮಾಹಿತಿ ಪಡೆದು, ಮೊಡಂಕಾಪು ಚರ್ಚಿನ ಫಾದರ್‌ರವರನ್ನು ನೇರ ಭೇಟಿ ಮಾಡಿ ಹೆಚ್ಚಿನ ಮಾಹಿತಿಯಿಂದ ಸಿಒಡಿಪಿಯ ವಾರ್ಷಿಕ ಸಾಲ ರೂ. ೫೦,೦೦೦/-ಸಕಾಲದಲ್ಲಿ ಪಡೆಯಲು ಸಾಧ್ಯವಾಯಿತು ಎಂದು ವಿಲಿಯಮ್ ಡಿಸೋಜಾ ಚರ್ಚಿನ ಫಾದರ್‌ಗೆ ಧನ್ಯವಾದ ಹೇಳುತ್ತಾರೆ.

**ಕೋಷ್ಟಕ-೪: ಸಾಲ ಪಡೆಯಲು ತಗಲಿದ ದಿನಗಳು**

ಸಾಲ ಪಡೆಯಲು ವಿದ್ಯಾರ್ಥಿಗೆ ಎಷ್ಟು ದಿನಗಳು ತಗುಲಿದವು ಎಂಬ ಪ್ರಶ್ನೆಯನ್ನು ೯೦ ಜನ ವಿದ್ಯಾರ್ಥಿಗಳಿಂದ ಕೇಳಿ ಮಾಹಿತಿ ಪಡೆಯಲಾಯಿತು. ೮೦ (೮೮.೮೮%) ಜನ ವಿದ್ಯಾರ್ಥಿಗಳು ಒಂದು ತಿಂಗಳು ಸಾಲ ಪಡೆಯಲು ತಗಲಿತು ಎನ್ನುತ್ತಾರೆ. ೧೦ (೧೧.೧%) ಜನ ವಿದ್ಯಾರ್ಥಿಗಳು ಒಂದು ತಿಂಗಳು ಜಾಯ್ತಿ ತಗಲಿತು ಎಂದಿದ್ದಾರೆ. ಅರ್ಜಿ ಹಾಕಿದ ೧೫ ದಿನದೊಳಗೆ ಸಂದರ್ಶನಕ್ಕೆ ಮಾಹಿತಿ ಬರುತ್ತದೆ. ಸಂದರ್ಶನ ಸಮಯದಲ್ಲಿ ದಾಖಲೆಗಳನ್ನು ಪರೀಕ್ಷಿಸಿ ವಿದ್ಯಾರ್ಥಿಯ ಅಗತ್ಯವನ್ನು ಗಮನಿಸಿ ಸಾಲವನ್ನು ನಿಗದಿಗೊಳಿಸಲಾಗುತ್ತದೆ. ಸಂದರ್ಶನ ಆದ ೧೫ ದಿನದೊಳಗೆ ಹಣ ವಿದ್ಯಾರ್ಥಿಯ ಬ್ಯಾಂಕ್ ಅಕೌಂಟಿಗೆ ಜಮೆಯಾಗುತ್ತದೆ. ಸರಾಸರಿಯಾಗಿ ಒಂದು ತಿಂಗಳ ಅವಧಿಯಲ್ಲಿ ಸಾಲ ದೊರೆಯುತ್ತದೆ ಎಂದು ವಿದ್ಯಾರ್ಥಿಗಳು ಹೇಳಿದ್ದಾರೆ. ಸಮುದಾಯ ವಿದ್ಯಾರ್ಥಿಗಳಿಗೆ ಶಿಕ್ಷಣಕ್ಕೆ ನೆರವು ನೀಡುವ ಉದ್ದೇಶನೇ ಸಿಒಡಿಪಿಯದ್ದು ಆಗಿರುವಾಗ ಅನಗತ್ಯ ವಿಳಂಬ ಸಿಒಡಿಪಿಯಿಂದ ಆಗಲಿಲ್ಲವೆಂದು ಮಾಹಿತಿ ಇದ್ದು ಆದರೆ ಅರ್ಜಿಯಲ್ಲಿ ವಾಳೆಯ, ಗುರಿಕಾರ, ಚರ್ಚಿನ ಮುಖ್ಯಗುರುವಿನ ಸಹಿ ಹಾಕುವಾಗ ವಿಳಂಬವಾಗಿರುತ್ತವೆ. ಅಲ್ಲದೆ ವಿದ್ಯಾರ್ಥಿಗೆ ಸರಿಯಾದ ಮಾಹಿತಿಯ ಕೊರತೆ ಕಂಡುಬರುತ್ತದೆ. ಕಾಸರ್‌ಗೋಡು ಮತ್ತು ಬೆಳ್ತಂಗಡಿಯಿಂದ ಬರುವ ವಿದ್ಯಾರ್ಥಿಗಳಿಗೆ ಮಾಹಿತಿಯ ಅಭಾವ ಹಾಗೂ ಸ್ಥಳೀಯ ಮಟ್ಟದಲ್ಲಿ ಚರ್ಚಿನ ಪ್ರೋತ್ಸಾಹವಿಲ್ಲದಾಗ ವಿಳಂಬವಾಗುತ್ತದೆ ಎಂದು ತಿಳಿಯಲಾಗಿದೆ.

**ಕೋಷ್ಟಕ-೫: ಸಾಲ ಪಡೆಯುವಾಗ ಎಲ್ಲಾ ದಾಖಲೆಗಳನ್ನು ಸಿಒಡಿಪಿ ಕೇಳಿಕೊಂಡಿದೆ.**

ಸಿಒಡಿಪಿಯ ವಿದ್ಯಾರ್ಥಿ ಸಾಲ ಯೋಜನೆ ಎಡ್ಯುಕೇರ್ ವಿದ್ಯಾರ್ಥಿ ಸಾಲವನ್ನು ಬಿಡುಗಡೆ ಮಾಡುವಾಗ ಈ ಕೆಳಗಿನ ದಾಖಲೆಗಳನ್ನು ಒದಗಿಸಬೇಕು. ಭರ್ತಿ ಮಾಡಿದ ಅರ್ಜಿಯಲ್ಲಿ ವಾಳೆಯ ಗುರಿಕಾರ ಹಾಗೂ ಚರ್ಚಿನ ಮುಖ್ಯ ಗುರುವಿನ ಸಹಿ ಇರಬೇಕು. ಅರ್ಜಿದಾರರ ಭಾವಚಿತ್ರ, ಆಧಾರ್‌ಕಾರ್ಡ್‌ನ ಅಥವಾ ರೇಷನ್ ಕಾರ್ಡಿನ ಪ್ರತಿ, ಇತ್ತೀಚಿನ ಅಂಕಪಟ್ಟಿಯ ಪ್ರತಿ ಅಥವಾ ಇತ್ತೀಚಿನ ಮೆಸ್ಕಾಂ ಬಿಲ್ಲಿನ ಪ್ರತಿ ಅಥವಾ ಇತ್ತೀಚಿನ ಶಾಲೆ ಬಿಟ್ಟ ಪ್ರಮಾಣಪತ್ರ, ಬೇರೆ ವಿದ್ಯಾರ್ಥಿ ವೇತನಕ್ಕೆ ಅರ್ಜಿ ಹಾಕಿದ/ಸಿಕ್ಕಿದ ದಾಖಲೆಗಳನ್ನು ಒದಗಿಸಬೇಕು. ೯೦ ವಿದ್ಯಾರ್ಥಿಗಳಲ್ಲಿ ೮೮ ಜನ ವಿದ್ಯಾರ್ಥಿಗಳು ಅಂದರೆ (೯೭.೭೭%) ಎಲ್ಲಾ ದಾಖಲೆಗಳನ್ನು ಒದಗಿಸಿದ್ದಾರೆ ಎಂದು ಮಾಹಿತಿ ನೀಡಿದ್ದಾರೆ. ೨ ಜನ ವಿದ್ಯಾರ್ಥಿಗಳು ಅಂದರೆ (೨.೨೨%) ಎಲ್ಲಾ ದಾಖಲೆಗಳನ್ನು ಒಮ್ಮೆಲೇ ನೀಡಲಿಲ್ಲ ತಡವಾಗಿ ನೀಡಿದ್ದಾರೆ ಎಂದು ಮಾಹಿತಿ ಕೊಟ್ಟಿದ್ದಾರೆ. ಸಿಒಡಿಪಿಯ ಸಾಲಯೋಜನೆಯು ಬಡ್ಡಿರಹಿತವಾಗಿದ್ದು ಸೂಕ್ತವಾದ ದಾಖಲೆಗಳನ್ನು ಒದಗಿಸುವುದು ಅನಿವಾರ್ಯವಾಗಿದೆ. ಸಿಒಡಿಪಿಯ ತನ್ನ ಸಾಲಕ್ಕೆ ಬೆಲೆಬಾಳುವ ಚಿನ್ನಾಭರಣಗಳು ದಾಖಲೆ ಅಥವಾ ಜಾಗದ ದಾಖಲೆಗಳನ್ನು ಅಡವಿಡಲು ಅಥವಾ ವಿದ್ಯಾರ್ಥಿಯ ಹಿಂದಿನ ಸಾಲಿನ ಕಲಿತ ಸರ್ಟಿಫಿಕೇಟನ್ನು ಅಡವಿಡಲು ಹೇಳುವುದಿಲ್ಲ. ಕೇವಲ ಶಿಕ್ಷಣಕ್ಕೆ ಸಂಬಂಧಿಸಿದಂತೆ ದಾಖಲೆಗಳು ಹಾಗೂ ಇ-ಸ್ಟ್ಯಾಂಪ್ ಪೇಪರಿನಲ್ಲಿ ಸಾಲ ಪಡೆದುಕೊಂಡ ಬಗ್ಗೆ ಒಪ್ಪಂದ ಪತ್ರ ಒದಗಿಸುವಂತೆ ಕೇಳುತ್ತದೆ. ಕೆಲವು ಆಡಳಿತಾತ್ಮಕವಾಗಿ ದಾಖಲೆಗಳನ್ನು ಪರಿಶೀಲಿಸುವಾಗ ವಿಳಂಬವಾಗಿದೆ ಎಂದು ಹೇಳಲಾಗಿದೆ.

**ಕೋಷ್ಟಕ-೬: ಸಾಲ ಪಡೆಯಲು ಪಾಲಕರ ಪ್ರೋತ್ಸಾಹ ಸಿಒಡಿಪಿಗೆ ಸಿಕ್ಕಿದೆಯೇ?**

ಎಷ್ಟು ಜನ ವಿದ್ಯಾರ್ಥಿಗಳಿಗೆ ಸಿಒಡಿಪಿಯ ಸಾಲ ಪಡೆಯಲು ಪಾಲಕರ ಪ್ರೋತ್ಸಾಹವಿದೆ ಎಂದು ತಿಳಿಯಲು ೯೦ ಜನ ವಿದ್ಯಾರ್ಥಿಗಳಲ್ಲಿ ಈ ಪ್ರಶ್ನೆಯನ್ನು ಕೇಳಿ ಮಾಹಿತಿ ಪಡೆಯಲಾಯಿತು.

ಮೇಲಿನ ಕೋಷ್ಟಕದ ಪ್ರಕಾರ ೬೭ (೭೪.೪%) ಜನ ವಿದ್ಯಾರ್ಥಿಗಳು ಪಾಲಕರ ಪ್ರೋತ್ಸಾಹವಿದೆ ಎಂದು ಮಾಹಿತಿ ನೀಡಿದ್ದಾರೆ ೨೩ (೨೫.೫%) ಪಾಲಕರ ಪ್ರೋತ್ಸಾಹವಿಲ್ಲ ಎಂದು ಹೇಳಿದ್ದಾರೆ. ಅವರೇ ಸ್ವಂತ ಪಾಲಕರನ್ನು ಒಪ್ಪಿಸಿ ಕೊನೆಗೆ ಸಾಲ ಪಡೆಯುವ ಅರ್ಜಿಗೆ ಪಾಲಕರ ಸಹಿ ಹಾಕಿಸಿಕೊಂಡಿದ್ದಾರೆ ಎಂದು ಮಾಹಿತಿ ಕೊಟ್ಟಿದ್ದಾರೆ.

ಶಿಕ್ಷಣ ಮುಗಿದ ೧೮ ತಿಂಗಳೊಳಗೆ ಸಾಲವನ್ನು ಮರು ಪಾವತಿಸಬೇಕಾಗುತ್ತದೆ. ಇಲ್ಲವಾದರೆ ೨೪% ವಾರ್ಷಿಕ ಬಡ್ಡಿಯನ್ನು ಸಾಲದಾರರು ಸಿಒಡಿಪಿಗೆ ಪಾವತಿಸಬೇಕಾಗುತ್ತದೆ. ಸಕಾಲಕ್ಕೆ ಕೆಲಸ ಸಿಗದಿದ್ದರೆ ಸಾಲವನ್ನು ಮರುಪಾವತಿಸಲು ಅಸಾಧ್ಯ. ಅದಲ್ಲದೆ. ಸಿಒಡಿಪಿಯವರು ಸಾಲವನ್ನು ನೀಡುವಾಗ ಅರ್ಜಿ ಫಾರ್ಮಿನಲ್ಲಿ ವಾಳೆಯ ಗುರಿಕಾರ ಹಾಗೂ ಚರ್ಚಿನ ಮುಖ್ಯ ಧರ್ಮಗುರುಗಳ ಸಹಿಯನ್ನು ಹಾಕಿಸುತ್ತಾರೆ, ಒಂದು ವೇಳೆ ಸಾಲವನ್ನು ಹಿಂದೆ ನೀಡಲು ತಡವಾದಲ್ಲಿ ಸಿಒಡಿಪಿಯವರು ಚರ್ಚಿನ ಮುಖ್ಯ ಗುರುವಿಗೆ ಅಥವಾ ವಾಳೆಯ ಗುರಿಕಾರರಿಗೆ ಮಾಹಿತಿ ನೀಡಿ ಅವರಿಂದ ಸಾಲದಾರರಿಗೆ ಒತ್ತಾಯಿಸುವಂತೆ ಮಾಡುತ್ತಾರೆ. ಇದರಿಂದ ಸಾಲಗಾರರ ಸ್ವಾಭಿಮಾನಕ್ಕೆ ಧಕ್ಕೆಯಾಗಬಹುದು ಎಂದು ಪೂರ್ವ ಯೋಜಿತ ಪಾಲಕರು ತಮ್ಮ ಮಕ್ಕಳಿಗೆ ಸಿಒಡಿಪಿಯ ಸಾಲಕ್ಕೆ ಪ್ರೋತ್ಸಾಹಿಸುತ್ತಿಲ್ಲ.

**ಕೇಸ್‌ಸ್ಟಡಿ**

ಮಂಗಳೂರು ತಾಲೂಕಿನ ಬಜ್ಪೆ ಗ್ರಾಮದ ವಲೇರಿಯನ್ ಮಿನೇಜಸ್ ಹಾಗೂ ಗ್ರೇಸಿ ಮಿನೇಜಸ್ ಅವರ ಏಕೈಕ ಪುತ್ರಿ ವಲಿಟಾ ಗ್ರೆವಿಲ್ಲಾ ಮಿನೇಜಸರವರನ್ನು ಸಿಒಡಿಪಿಯ ವಿದ್ಯಾರ್ಥಿ ಸಾಲ ಯೋಜನೆಯ ಫಲಾನುಭವಿ. ಅವರು ಬಾಡಿಗೆ ಮನೆಯಲ್ಲಿ ಇದ್ದು ತಂದೆ ವಲೇರಿಯನ್ ಮಿನೇಜಸ್‌ರವರು ಶಾಲಾ ವಾಹನದ ಚಾಲಕರು ಆಗಿದ್ದರೆ ಮಗಳ ಎಮ್‌ಎಸ್‌ಸಿ (ಗಣಿತ) ಶಿಕ್ಷಣಕ್ಕೆ ಸಿಒಡಿಪಿಯ ಸಾಲಯೋಜನೆಯನ್ನು ಪಡೆಯಲು ಅವರ ಪೋಷಕರು ಹಿಂಜರಿದ್ದರು. ಸಾಲವನ್ನು ಶಿಕ್ಷಣ ಮುಗಿಸಿದ ೧೮ ತಿಂಗಳೊಳಗೆ ಮರುಪಾವತಿ ಮಾಡಬೇಕಿತ್ತು. ಒಂದು ವೇಳೆ ಮರುಪಾವತಿ ಮಾಡಲು ೧೮ ತಿಂಗಳ ಒಳಗೆಯಾಗದಿದ್ದರೆ ಏನು ಮಾಡುವುದು ಎಂಬ ಕೆಲವು ಪೂರ್ವಾಗ್ರಹ ಚಿಂತನೆಯಿಂದ ಮಗಳಿಗೆ ಸಾಲವನ್ನು ಪಡೆಯಲು ನಿರಾಕರಿಸಿದ್ದರೂ ಆದರೂ ಮಗಳು ತಂದೆಯನ್ನು ಒಪ್ಪಿಸಿ ಎಮ್.ಎಸ್.ಸಿ (ಗಣಿತ) ಮುಗಿದ ಕೂಡಲೇ ಮೂಡಬಿದಿರೆಯ ಆಳ್ವಾಸ್ ಪಿಯು. ಕಾಲೇಜಿಗೆ ವಲಿಟಾರವರು ಪ್ರಾಧ್ಯಾಪಿಕೆಯಾಗಿ ಸೇರ್ಪಡೆಯಾದರು. ಕಾಲೇಜಿನಲ್ಲಿ ಸಿಇಟಿ ಹಾಗೂ ಟ್ಯೂಷನ್ ಕೊಟ್ಟು ಎರಡು ವರ್ಷದಲ್ಲಿ ೧,೦೦,೦೦೦/- ತೆಗೆದ ಸಾಲವನ್ನು ಮರುಪಾವತಿಸಿದ್ದರೆ, ತಂದೆಯ ಪ್ರೋತ್ಸಾಹವಿಲ್ಲದೆ ಸ್ವಂತ ಛಲದಿಂದ ಹಣವನ್ನು ಹಿಂದೆ ನೀಡಿದ್ದೇನೆ ಎಂದು ಮಾಹಿತಿ ನೀಡಿದ್ದಾರೆ.

**ಕೋಷ್ಟಕ-೭: ಸಿಒಡಿಪಿಯು ಹೇಗೆ ತನ್ನ ಸಾಲವನ್ನು ವಸೂಲು ಮಾಡಿದೆ.**

ಫಲಾನುಭವಿಗಳು ಸಿಒಡಿಪಿಯ ಸಾಲವನ್ನು ಹೇಗೆ ಮತ್ತು ಯಾರು ಮರುಪಾವತಿಸುತ್ತಾರೆ ಎಂಬ ಪ್ರಶ್ನೆಯನ್ನು ಕೇಳಿ ಮಾಹಿತಿ ಪಡೆಯಲಾಯಿತು. ೯೦ ವಿದ್ಯಾರ್ಥಿ ಫಲಾನುಭವಿಗಳಲ್ಲಿ ಸಾಲದ ಮರುಪಾವತಿ ಮಾಹಿತಿ ಕೇಳಿದಾಗ ೮೦ (೮೮.೮%) ವಿದ್ಯಾರ್ಥಿಗಳು ಶಿಕ್ಷಣ ಮುಗಿದ ಮೇಲೆ ಸ್ವಂತ ದುಡಿದು ಸಾಲವನ್ನು ಮರುಪಾವತಿಸುವುದಾಗಿ ಹೇಳಿದ್ದಾರೆ. ೬ ಜನ (೬.೬%) ವಿದ್ಯಾರ್ಥಿಗಳು, ಮನೆಯವರು ಸಾಲವನ್ನು ಮರುಪಾವತಿಸುವುದಾಗಿ ಹೇಳಿದ್ದಾರೆ. ೪ (೪.೪%) ವಿದ್ಯಾರ್ಥಿಗಳು ಇನ್ನು ಈ ಬಗ್ಗೆ ಚರ್ಚಿಸಿಲ್ಲ ಎಂದು ಮಾಹಿತಿ ನೀಡಿದ್ದಾರೆ. ಇವರೆಗೆ ಸಾಲ ಪಡೆದುಕೊಂಡವರಲ್ಲಿ ೯೯% ಸಾಲವನ್ನು ಹಿಂದೆ ನೀಡಿದ್ದಾರೆ ಎಂದು ಸಿಒಡಿಪಿಯು ಮಾಹಿತಿ ನೀಡಿದೆ. ಈವರೆಗೆ ಕೇವಲ ೩ ಜನ ವಿದ್ಯಾರ್ಥಿಗಳು ಸಾಲವನ್ನು ಹಿಂದೆ ನೀಡಲಿಲ್ಲ. ಸಾಲಕ್ಕೆ ಒಡಂಬಡಿಕೆವಿರುವ ಅವಧಿ ಮುಗಿದ ಕೂಡಲೇ ಸಿಒಡಿಪಿಯು ಅವರನ್ನು ನೆನಪಿಸುತ್ತದೆ. ಕಾಗದ, ಎಸ್‌ಎಮ್‌ಎಸ್ ಹಾಗೂ ಫೋನ್ ಕರೆಯ ಮೂಲಕ ಅವರನ್ನು ನೆನಪಿಸಿ ಸಾಲವನ್ನು ಹಿಂದೆ ಪಡೆಯುತ್ತಿದೆ.

**ಕೋಷ್ಟಕ-೮: ಸಿಒಡಿಪಿಯ ಸಾಲಯೋಜನೆಯ ನಿಯಮಗಳು ಬ್ಯಾಂಕಿನ ಸಾಲಕ್ಕಿಂತ ಸುಲಭವಾಗಿವೆಯೇ?**

ಸಿಒಡಿಪಿಯ ಸಾಲ ಯೋಜನೆಯ ನಿಯಮಗಳು ಎಷ್ಟರಮಟ್ಟಿಗೆ ವಿದ್ಯಾರ್ಥಿಸ್ನೇಹಿಯಾಗಿವೆ ಎಂದು ತಿಳಿಯಲು ಈ ಪ್ರಶ್ನೆಯನ್ನು ಕೇಳಿ ಮಾಹಿತಿ ಪಡೆಯಲಾಯಿತು.

೯೦ ವಿದ್ಯಾರ್ಥಿಗಳಲ್ಲಿ ಈ ಪ್ರಶ್ನೆಯನ್ನು ಕೇಳಿದಾಗ ಎಲ್ಲರೂ (೧೦೦%) ಸುಲಭವಾಗಿದೆ ಎಂದು ಮಾಹಿತಿ ನೀಡಿದ್ದಾರೆ. ಸಿಒಡಿಪಿಯ ಸಿಬ್ಬಂದಿ ವರ್ಗ, ಸಂದರ್ಶನ, ಒಪ್ಪಂದದ ಸಮಯದಲ್ಲಿ ಸಿಒಡಿಪಿಯು ಆತ್ಮೀಯವಾಗಿ ವಿದ್ಯಾರ್ಥಿಗಳಲ್ಲಿ ಮಾಹಿತಿಯನ್ನು ನೀಡಿ ಅವರನ್ನು ಹಂತಹಂತವಾಗಿ

ಮಾರ್ಗದರ್ಶನ ನೀಡಿದೆ ಎಂದು ಹೇಳಿದ್ದಾರೆ. ಆದ್ದರಿಂದ ಸಾಲ ಪಡೆಯಲು ಸುಲಭವಾಗಿದೆ ಎಂದು ವಿದ್ಯಾರ್ಥಿಗಳು ಮಾಹಿತಿ ನೀಡಿದ್ದಾರೆ. ದಾಖಲೆಗಳನ್ನು ಪರೀಕ್ಷಿಸುವಾಗ ವಿಳಂಬ ಮಾಡದೇ ಕನಿಷ್ಠ ದಾಖಲೆಗಳನ್ನು ಸ್ವೀಕರಿಸಿ ಸಾಲವನ್ನು ಮಂಜೂರು ಮಾಡಿದ್ದಾರೆ ಎಂದು ೧೦೦% ಶೇಕಡಾ ವಿದ್ಯಾರ್ಥಿಗಳು ಹೇಳಿಕೊಂಡಿದ್ದಾರೆ. ಸಾಲ ಮರುಪಾವತಿಸುವಾಗ ಸಕಾಲಕ್ಕೆ ನೆನಪಿಸಿ ಸಾಲವನ್ನು ಘನತೆಯಿಂದ ಮರು ಪಾವತಿಸುವಂತೆ ಕೇಳಿಕೊಂಡಿದ್ದಾರೆ ಎಂದು ಮಾಹಿತಿ ಸಹ ನೀಡಿದ್ದಾರೆ. ಸಿಒಡಿಪಿಯವರು ಸಾಲದ ನಿಯಮಗಳು ಚರ್ಚಿನಲ್ಲಿ, ಚರ್ಚಿನ ಸಂಘ ಸಂಸ್ಥೆಯಾದ ಐಸಿಒಎಮ್, ವೈಸಿಎಸ್, ಕಥೋಲಿಕ್ ಸಭಾ ಅಲ್ಲದೆ ಕಥೋಲಿಕ ಶಾಲಾ-ಕಾಲೇಜುಗಳಲ್ಲಿ ಲಭ್ಯವಿರುತ್ತದೆ. ಈ ನಿಯಮಗಳಿಗೆ ಸರಿಯಾದ ತಯಾರಿ ಸ್ಥಳೀಯ ಮಟ್ಟದಲ್ಲೇ ನಡೆಯುತ್ತಿದ್ದು, ಅವುಗಳನ್ನು ಪಾಲಿಸಲು ಸುಲಭವಾಗುತ್ತದೆ. ಅಲ್ಲದೆ ಬ್ಯಾಂಕಿನ ನಿಯಮಗಳಂತೆ ಸಿಒಡಿಪಿಯ ನಿಯಮಗಳಲ್ಲಿ ಜಾಗದ ಅಥವಾ ಬೆಲೆಬಾಳುವ ಒಡವೆಗಳ ದಾಖಲೆಗಳನ್ನು ಒದಗಿಸಲಾಗುವುದಿಲ್ಲ. ವಿದ್ಯಾರ್ಥಿ-ಸ್ನೇಹಿ ನಿಯಮಗಳು ವಿದ್ಯಾರ್ಥಿಗಳಿಗೆ ಪೂರಕವಾಗಿವೆಂದು ೧೦೦ & ೧೦೦ ಜನ ವಿದ್ಯಾರ್ಥಿಗಳು ಹೇಳಿಕೊಂಡಿದ್ದಾರೆ.

**ಕೋಷ್ಟಕ-೯: ಸಾಲಯೋಜನೆಯನ್ನು ನೀಡುವಾಗ ಸಿಒಡಿಪಿಯು ಪಕ್ಷಪಾತ.**

ಸಿಒಡಿಪಿಯ ತನ್ನ ಸಾಲ ಯೋಜನೆಯನ್ನು ವಿದ್ಯಾರ್ಥಿಗಳಿಗೆ ತಲುಪಿಸುವಾಗ ಏನಾದರೂ ಸಿಒಡಿಪಿ ಪಕ್ಷಪಾತ ಮಾಡುತ್ತಿದೆಯೇ ಎಂಬುದನ್ನು ತಿಳಿಯಲು ಈ ಪ್ರಶ್ನೆಯನ್ನು ವಿದ್ಯಾರ್ಥಿಗಳಲ್ಲಿ ಕೇಳಿ ಮಾಹಿತಿಯನ್ನು ಪಡೆಯಲಾಯಿತು. ೮೩ (೯೨.೨೨%) ವಿದ್ಯಾರ್ಥಿ, ಫಲಾನುಭವಿಗಳು ಪಕ್ಷಪಾತ ನಡೆದಿಲ್ಲ ಎಂದು ಮಾಹಿತಿ ಕೊಟ್ಟಿದ್ದಾರೆ. ೭(೭.೭೭%) ವಿದ್ಯಾರ್ಥಿಗಳು ಪಕ್ಷಪಾತ ನಡೆದಿದೆ ಎಂದು ಹೇಳಿದ್ದಾರೆ. ಆದಾಯ ಜಾಸ್ತಿವಿರುವ ವಿದ್ಯಾರ್ಥಿಗಳಿಗೆ ಸಿಒಡಿಪಿಯ ಸಾಲ ಸೌಲಭ್ಯ ದೊರೆತಿದೆ. ಆದ್ದರಿಂದ ಯಾರಿಗೆ ದೊರೆಯಬೇಕಿತ್ತು ಅವರಿಗೆ ದೊರೆಯಲಿಲ್ಲ ಎಂದು ಹೇಳಿದ್ದಾರೆ. ಸುಳ್ಳು ಮಾಹಿತಿಯನ್ನು ನೀಡಿ ಸಿಒಡಿಪಿಯನ್ನು ಸರಿಯಾಗಿ ಪರಿಶೀಲನೆ ಮಾಡದೆ ಪಕ್ಷಪಾತ ಮಾಡಿದೆ ಎಂದು ಹೇಳಿದ್ದಾರೆ.

ಅರ್ಜಿಯಲ್ಲಿ ವಾಳೆಯ ಗುರಿಕಾರ ಹಾಗೂ ಚರ್ಚಿನ ಮುಖ್ಯ ಧರ್ಮಗುರುವಿನ ಸಹಿವಿರಬೇಕು ಎಂಬ ನಿಯಮವಿದೆ. ಸ್ಥಳೀಯ ಚರ್ಚಿನ ಆಡಳಿತವು ಸುವ್ಯವಸ್ಥೆಯಲ್ಲಿ ನಡೆಯಲು ವಾಳೆಗಳನ್ನಾಗಿ ವಿಂಗಡಿಸಿದ್ದಾರೆ. ವಾಳೆಯ ಮಟ್ಟದಲ್ಲಿ ವಿವಿಧ ಕಾರ್ಯಕ್ರಮಗಳು ನಡೆಯುತ್ತಿದ್ದು, ವಾಳೆಯ ಎಲ್ಲ ಸದಸ್ಯರ ಬೆಂಬಲ ವಾಳೆಯ ಗುರಿಕಾರರಿಗೆ ಅಗತ್ಯವಿರುತ್ತದೆ. ಆದ್ದರಿಂದ ಸಿಒಡಿಪಿಗೆ ಅರ್ಜಿ ಸಲ್ಲಿಸುವಾಗ ಅರ್ಹತೆವಿಲ್ಲದವರಿಗೂ ಸಹ ವಾಳೆಯ ಗುರಿಕಾರ ಅನಿವಾರ್ಯತೆಯಿಂದ ಸಹಿ ಹಾಕಬೇಕಾಗುತ್ತದೆ. ಆದುದರಿಂದ ಸ್ಥಳೀಯ ಮಟ್ಟದಲ್ಲಿ ಪಕ್ಷಪಾತ ನಡೆಯುತ್ತದೆ. ಸಿಒಡಿಪಿಯು ಚರ್ಚಿನ ಗುರುವಿನ ಸಹಿಗೆ ಗೌರವಿಸುವ ಕಾರಣ ತಮಗೆ ಇಷ್ಟವಾದ ಕುಟುಂಬದವರಿಗೆ ಓಲೈಸುವ ಅಥವಾ ಸದಾ ಸಮಸ್ಯೆಗಳನ್ನು ಕೊಡುವ ಕುಟುಂಬದವರನ್ನು ದೂರವಿಡಲು ಅವರ ಅರ್ಜಿಗೆ ಅರ್ಹತೆಯಿಲ್ಲದಿದ್ದರೂ ಸಹಿ ಹಾಕಿದರಿಂದ ಪಕ್ಷಪಾತ ಚರ್ಚಿನ ಮಟ್ಟದಲ್ಲಿ ಆಗುತ್ತಿದೆ. ಸಿಒಡಿಪಿಯ ಸಾಲ ನೀಡುವಾಗ ಸಂದರ್ಶನದ ಮೂಲಕ ಫಲಾನುಭವಿಗಳನ್ನು ಆಯ್ಕೆ ಮಾಡಲಾಗುತ್ತದೆ.

ಸಂದರ್ಶಕರು ಹಾಗೂ ಕೆಲವು ಸಿಬ್ಬಂದಿಯವರಿಂದ ಪಕ್ಷಪಾತ ನಡೆದಿದೆ ಎಂದು ಮಾಹಿತಿ ನೀಡಿದ್ದಾರೆ. ಅಂದರೆ, ಸಾಲವನ್ನು ಮಂಜೂರು ಮಾಡುವಾಗ ಕೆಲವರಿಗೆ ಅರ್ಹತೆಯಿಲ್ಲದಿದ್ದರೂ ಹೆಚ್ಚಿನ ಸಾಲವನ್ನು ಮಂಜೂರು ಮಾಡಿದ್ದಾರೆ ಎಂದು ತಿಳಿದು ಬಂದಿದೆ.

**ಕೋಷ್ಟಕ-೧೦: ಸಾಲ ಯೋಜನೆಯಲ್ಲಿ ಪ್ರಭಾವಿ ವ್ಯಕ್ತಿಗಳ ಪ್ರಭಾವ**

ಸಿಒಡಿಪಿಯ ಸಾಲಯೋಜನೆಯಲ್ಲಿ ಸ್ಥಳೀಯ ಪ್ರಭಾವೀ ವ್ಯಕ್ತಿಗಳ ಪ್ರಭಾವವಿದೆಯೇ ಎಂದು ತಿಳಿಯಲು ಈ ಪ್ರಶ್ನೆಯನ್ನು ಕೇಳಿ ಮಾಹಿತಿ ಪಡೆಯಲಾಯಿತು. ಮಾಹಿತಿದಾರರ ಮಾಹಿತಿಯನ್ನು ಈ ಕೆಳಗಿನ ಕೋಷ್ಟಕದಲ್ಲಿ ನೀಡಲಾಗಿದೆ. ಸಿಒಡಿಪಿಯ ಸಾಲ ಯೋಜನೆಯಲ್ಲಿ ೯೦ ಜನರ ಮಾಹಿತಿಯಲ್ಲಿ ೮೪ (೯೩.೩೩%) ವಿದ್ಯಾರ್ಥಿಗಳು ಸಿಒಡಿಪಿಯ ಸಾಲ ಯೊಜನೆಯಲ್ಲಿ ಪ್ರಭಾವಿ ವ್ಯಕ್ತಿಗಳ ಪ್ರಭಾವವಿಲ್ಲ ಎಂದು ಹೇಳಿದ್ದಾರೆ. ೬ (೬.೬೬%) ವಿದ್ಯಾರ್ಥಿಗಳು ಪ್ರಭಾವವಿದೆ ಎಂದು ಹೇಳಿದ್ದಾರೆ. ರಾಜಕೀಯ ವ್ಯಕ್ತಿಗಳು, ಸಾಮಾಜಿಕ ಕಾರ್ಯಕರ್ತರು, ಚರ್ಚಿನ ಪ್ರಧಾನ ಗುರುಗಳ ಕಾಗದದಿಂದ ಸಿಒಡಿಪಿಯು ಅರ್ಹತೆವಿಲ್ಲದವರಿಗೆ ಸಾಲ ಮಂಜೂರು ಮಾಡಲಾಗಿದೆ ಎಂದು ಮಾಹಿತಿ ನೀಡಿದ್ದಾರೆ.

**ಕೋಷ್ಟಕ-೧೧: ಸಿಒಡಿಪಿಯ ಸಾಲ ಯೋಜನೆಯಲ್ಲಿ ಸಿಒಡಿಪಿಯ ಸೇವೆಯ ಬಗ್ಗೆ ಮಾಹಿತಿದಾರನ ಅಭಿಪ್ರಾಯ**

ಸಿಒಡಿಪಿಯ ಸಾಲ ಹಾಗೂ ಇತರ ಬ್ಯಾಂಕುಗಳ ಸೇವೆಗಳ ಬಗ್ಗೆ ಮಾಹಿತಿದಾರನ ಮನಸ್ಥಿತಿಯನ್ನು ಅರಿಯುವ ಉದ್ದೇಶದಿಂದ ಈ ಪ್ರಶ್ನೆಯನ್ನು ಕೇಳಲಾಗಿದೆ. ಸಿಒಡಿಪಿಯು ತನ್ನ ಪ್ರತಿಷ್ಠಿತ ಯೋಜನೆ - ವಿದ್ಯಾರ್ಥಿ ಸಾಲ ಯೋಜನೆಯನ್ನು ಫಲಾನುಭವಿಗಳಿಗೆ ನೀಡುವಾಗ ಯಾವ ರೀತಿಯ ಸೇವೆಯನ್ನು ನೀಡಿದೆ. ವಿದ್ಯಾರ್ಥಿಗಳು ತೃಪ್ತಿಯನ್ನು ಹೊಂದಿದ್ದಾರಾ ಎಂದು ಅರಿಯಲು ೯೦ ಜನ ಮಾಹಿತಿದಾರರಲ್ಲಿ ೮೭ (೯೬.೬೬) ಜನ ಸಿಒಡಿಪಿಯ ಒಟ್ಟಾರೆ ಸೇವೆಯನ್ನು ಮೆಚ್ಚಿದರೆ ಉಳಿದ ೩ ಜನ ಅತೃಪ್ತಿಯನ್ನು ತೋರ್ಪಡಿಸಿದ್ದಾರೆ. ಸಿಒಡಿಪಿಯ ವಿದ್ಯಾರ್ಥಿ ಸಾಲ ಯೋಜನೆಯ ಉಸ್ತುವಾರಿಯನ್ನು ಎಡ್ಯುಕೇರ್ ಎಂಬ ಅಂಗಸಂಸ್ಥೆಯು (ಟ್ರಸ್ಟ್) ನೋಡಿಕೊಳ್ಳುವುದರಿಂದ ಇದರ ಕಛೇರಿಯು ಇನ್ಸ್‌ಸ್ಟಿಟ್ಯೂಟ್ ಫೋರ್ ಸೋಶಿಯಲ್ ಡೆವಲಪ್‌ಎಂಟ್‌ನ ಕಛೇರಿಯಲ್ಲಿದೆ. ಈ ಆಫೀಸು ಸಿಒಡಿಪಿಯ ಆಫೀಸಿನ ಬದಿಗೇನೆ ಇದೆ. ಸಿಒಡಿಪಿಯ ಆಫೀಸು ನೆಲಮಹಡಿಯ ಮೊದಲಿಗೇನೇ ಸಿಗುವ ಕಾರಣ ಎಲ್ಲರೂ ಸಿಒಡಿಪಿಯ ಸಾಲ ಯೋಜನೆಯು ಸಿಒಡಿಪಿಯ ಆಫೀಸಿನಲ್ಲೇ ಸಿಗುತ್ತದೆ ಎಂಬ ಕಲ್ಪನೆಯಿಂದ ಬರುವಾಗ ಸಿಒಡಿಪಿಯ ಆಫೀಸಿನವರು ಸರಿಯಾದ ಮಾಹಿತಿಯನ್ನು ನೀಡಲು ಅಶಕ್ತರಾದ ಸಮಯದಲ್ಲಿ ಮಾಹಿತಿದಾರರಿಗೆ ಸರಿಯಾದ ಮಾಹಿತಿ ದೊರೆಯುತ್ತಿಲ್ಲ. ಸಿಒಡಿಪಿಯ ಸಿಬ್ಬಂದಿ ಪಕ್ಕದ ಆಫೀಸಿಗೆ ಮಾರ್ಗದರ್ಶನ ನೀಡುವಾಗ ಕೆಲವೊಂದು ಸಲ ಅಸಡ್ಡೆಯಿಂದ ವರ್ತಿಸಿದ್ದಾರೆ.

**ಕೋಷ್ಟಕ-೧೨: ಇತರರಿಗೆ ಸಿಒಡಿಪಿಯ ಶಿಕ್ಷಣ ಸಾಲ ಯೋಜನೆಯ ಬಗೆಗೆ ತಿಳಿಸುವ ಇಚ್ಚೆ**

ಸಿಒಡಿಪಿಯ ವಿದ್ಯಾರ್ಥಿ ಸಾಲ ಯೋಜನೆಯ ಫಲಾನುಭವಿಗಳು ತೃಪ್ತಿ ಹಾಗೂ ಈ ಸಾಲದಿಂದ ಅವರಿಗೆ ಪ್ರಯೋಜನವಾಗಿದೆ ಅಥವಾ ಪ್ರಯೋಜನ ಆಗಲಿಲ್ಲವೇ, ಒಂದು ವೇಳೆ

ಏನಾದರೂ ಪ್ರಯೋಜನ ಆಗಿ ಇತರರಿಗೆ ಶಿಫಾರಸ್ಸು ಮಾಡಿದ್ದಾರೋ ಎಂಬ ಕುತೂಹಲದಿಂದ ಈ ಪ್ರಶ್ನೆಯನ್ನು ಕೇಳಲಾಗಿದೆ. ೮೦ ಜನ ಮಾಹಿತಿದಾರರಲ್ಲಿ ೭೮ ಜನರು ಬೇರೆಯವರಿಗೆ ಸಿಓಡಿಪಿಯ ಸಾಲವನ್ನು ಶಿಫಾರಸ್ಸು ಮಾಡುತ್ತೇವೆ ಎಂದು ಹೇಳಿದರೆ ಇನ್ನುಳಿದ ೨ ಮಂದಿ ತಾವು ಇತರರಿಗೆ ಶಿಫಾರಸ್ಸು ಮಾಡುವುದಿಲ್ಲ ಎಂದು ಹೇಳಿದ್ದಾರೆ. ನಾವು ಬ್ಬೆರೆಯವರಿಂದ ಕಷ್ಟಪಟ್ಟುಸ್ ಮಾಹಿತಿಯನ್ನು ಸಂಗ್ರಹಿಸಿದ್ದೇವೆ. ಹಾಗೇನೇ ಇತರ ವಿದ್ಯಾರ್ಥಿಗಳು ಸಹ ಬೇರೆಯವರಿಂದ ಕಷ್ಟಪಟ್ಟು ವಿದ್ಯಾರ್ಥಿ ವೇತನದ ಬಗ್ಗೆ ಮಾಹಿತಿ ಪಡೆಯಲಿ ಎಂಬ ಫಲಾನುಭವಿಗಳ ನಡತೆಯ ಬಗ್ಗೆ ಮಾಹಿತಿಯನ್ನು ಈ ಅಧ್ಯಯನದಿಂದ ಪಡೆದುಕೊಳ್ಳಲಾಗಿದೆ.

**ಕೋಷ್ಟಕ-೧೩: ಸಾಲ ಮರುಪಾವತಿಯ ಅವಧಿ**

ಮಾಹಿತಿದಾರರು ಸಿಓಡಿಪಿಯಿಂದ ಪಡೆದ ಸಾಲವನ್ನು ಮರುಪಾವತಿಸಲು ನಿಗದಿಪಡಿಸಿದ ಅವಧಿಯ ಬಗ್ಗೆ ಅವರ ಅಭಿಪ್ರಾಯ ಸಂಗ್ರಹಿಸುವ ನಿಟ್ಟಿನಲ್ಲಿ ಈ ಪ್ರಶ್ನೆಯನ್ನು ಕೇಳಲಾಗಿದ್ದು ಇದಕ್ಕೆ ಮಾಹಿತಿದಾರರು ಈ ಕೆಳಗಿನ ಉತ್ತರವನ್ನು ನೀಡಿದ್ದಾರೆ. ೬೦ ಜನ ಮಾಹಿತಿದಾರರಲ್ಲಿ ೧೦ ಜನ ಸಾಲ ಮರು ಪಾವತಿಸಲು ಅವಧಿ ಜಾಸ್ತಿಯಾಯಿತು ಎಂದು ಹೇಳಿದ್ದಾರೆ, ೫೦ ಜನ ಸಾಲ ಮರುಪಾವತಿಸಲು ಅವಧಿ ಕಡಿಮೆಯಾಯಿತು ಎಂದಿದ್ದಾರೆ, ಇನ್ನುಳಿದ ೩೦ ಜನರು ಸಾಕಾಗುವಷ್ಟು ಕಾಲಾವಕಾಶ ಇದೆ ಎಂಬ ಅಭಿಪ್ರಾಯ ನೀಡಿದ್ದಾರೆ.

**ಕೇಸ್ ಸ್ಟಡಿ**

ಮಂಗಳೂರು ತಾಲೂಕಿನ ಬೆಳ್ತಂಗಡಿ ಮಡಂತ್ಯಾರಿನ ನವೀನ್ ಎಂಬುವರು ಇಂಜಿನಿಯರಿಂಗ್ ಕಲಿಯಲು ಸಿಓಡಿಪಿಯ ಸಾಲವನ್ನು ಪಡೆದಿದ್ದರು. ಬಡಕುಟುಂಬ ನವೀನ್ ತಂದೆ ಫೆಲಿಕ್ಸ್ ಮೊಂತೆರೋ ತೀರಿಕೊಂಡಿದ್ದಾರೆ ತಾಯಿ ವೆರೋನಿಕಾ ನೆರೆಕರೆಯ ಮನೆಯಲ್ಲಿ ಮನೆಕೆಲಸ ಮಾಡುತ್ತಾರೆ. ಬಿ.ಇ. ಶಿಕ್ಷಣ ಮುಗಿಸಿದ ನವೀನ್‌ಗೆ ಸರಿಯಾದ ಕೆಲಸ ಸಿಗದೆ ಒಂದು ವರ್ಷವಾಯಿತು. ಹಣವಿಲ್ಲದೆ ಸಿಓಡಿಡಿಪಿಯ ಸಾಲವನ್ನು ಹಿಂದುರುಗಿಸಲು ಅವನಿಗೆ ಸಾಧ್ಯವಾಗುತ್ತಿಲ್ಲ. ಶಿಕ್ಷಣ ಮುಗಿಸದ ೧೮ ತಿಂಗಳೊಳಗೆ ಸಾಲವನ್ನು ಮರುಪಾವತಿಸಲು ಪರದಾಡುತ್ತಿದ್ದಾನೆ. ಬಡತಾಯಿಯಲ್ಲಿ ಬೆಳ್ಳಿ-ಬಂಗಾರದ ಒಡವೆಗಳಿಲ್ಲ. ಸಿಓಡಿಪಿಯ ಸಾಲವನ್ನು ೧೮ ತಿಂಗಳೊಳಗೆ ತೀರಿಸಲು ಕಷ್ಟವಾಗುತ್ತಿದೆ, ಆದರೆ ಕೆಲಸ ಸಿಕ್ಕಿದ ಕೂಡಲೇ ಈ ಸಾಲವನ್ನು ಮರುಪಾವತಿಸುತ್ತೇನೆ ಎಂದು ಮಾಹಿತಿ ನೀಡಿದ್ದಾರೆ.

**ಕೋಷ್ಟಕ-೧೪: ಸಾಲ ಪಡೆದ ವಿದ್ಯಾರ್ಥಿಗಳಿಂದ ಸಿಓಡಿಪಿಯು ಏನಾದರೂ ಅಪೇಕ್ಷಿಸುತ್ತಿದೆಯೇ?**

ಸಿಓಡಿಪಿಯ ಬಡ್ಡಿರಹಿತ ಸಾಲ ಯೋಜನೆಯ ಫಲಾನುಭವಿಗಳಿಂದ ಸಿಓಡಿಪಿಯು ಏನಾದರೂ ಅಪೇಕ್ಷಿಸುತ್ತಿದೆಯೇ ಎಂದು ತಿಳಿಯಲು ಈ ಪ್ರಶ್ನೆಯನ್ನು ಕೇಳಲಾಗಿತ್ತು. ೬೦ ಜನರಲ್ಲಿ ಈ ಪ್ರಶ್ನೆಯನ್ನು ಕೇಳಿದ್ದು ೧೦೦% ಶೇಕಡಾ ಜನರು ಇಲ್ಲ ಎಂಬ ಮಾಹಿತಿಯನ್ನು ನೀಡಿದ್ದಾರೆ.

**ಕೋಷ್ಟಕ–೧೫: ಸಿಒಡಿಪಿಯ ವಿದ್ಯಾರ್ಥಿ ಸಾಲ ಪಡೆದುದರಿಂದ ಸ್ವತಂತ್ರವಾಗಿ ಪದವಿ ಪಡೆಯಲು ಸಾಧ್ಯವಾಯಿತು.**

ಈ ವಿದ್ಯಾರ್ಥಿ ಸಾಲ ಯೋಜನೆಯಿಂದ ಎಷ್ಟು ವಿದ್ಯಾರ್ಥಿಗೆ ಸ್ವತಂತ್ರ ಪದವಿ ಪಡೆಯಲು ಸಾಧ್ಯವಾಯಿತು ಎಂದು ತಿಳಿಯುವ ಉದ್ದೇಶದಿಂದ ಈ ಪ್ರಶ್ನೆಯನ್ನು ಕೇಳಲಾಗಿದ್ದು ೯೦ ಜನ ವಿದ್ಯಾರ್ಥಿಗಳಲ್ಲಿ ಈ ಪ್ರಶ್ನೆಯನ್ನು ಕೇಳಿದ್ದು ೬೨ ಜನ ವಿದ್ಯಾರ್ಥಿಗಳು ಹೌದು ಎಂದು ಮಾಹಿತಿ ನೀಡಿದ್ದಾರೆ. ಆದರೆ ೨೮ ಜನ ವಿದ್ಯಾರ್ಥಿಗಳು ಇಲ್ಲವೆಂಬ ಮಾಹಿತಿಯನ್ನು ನೀಡಿದ್ದಾರೆ.

**ಕೇಸ್‌ಸ್ಟಡಿ:**

ಕಾಸರಗೋಡು ಜಿಲ್ಲೆಯ ಬೇಳಾ ಗ್ರಾಮದ ಶ್ರೀ ಮಾವ್ರಿಸ್ ಕ್ರಾಸ್ತರವರ ಜೀವ ಕ್ರಾಸ್ತಾರವರಿಗೆ ಯಾರ ಹಂಗಿಲ್ಲದೇ ತಾನೇ ಸ್ವಂತ ಖರ್ಚಿನಲ್ಲಿ ಕಲಿಯಬೇಕು ಎಂಬ ಗುರಿಯಿತ್ತು. ತಂದೆ ಆಟೋ ರಿಕ್ಷಾ ಚಾಲಕರು ಆದ್ದರಿಂದ ದೊಡ್ಡಮಟ್ಟದ ಆದಾಯ ಅವರಲ್ಲಿರಲಿಲ್ಲ. ಇಬ್ಬರು ತಮ್ಮಂದಿರ ಶಾಲಾ ವೆಚ್ಚವು ತಂದೆಯ ಆದಾಯದಿಂದಲೇ ಆಗಬೇಕಾಗಿತ್ತು. ಚರ್ಚಿನ ಧರ್ಮಗುರುಗಳ ಸಹಾಯದಿಂದ ಜೀವನ್‌ಗೆ ಬಿ.ಕಾಂ. ಕಲಿಯಲು ಸಿಒಡಿಪಿಯ ವಿದ್ಯಾರ್ಥಿ ಸಾಲ ರೂ. ೨೦,೦೦೦ ಸಾವಿರ ದೊರೆತಿದೆ. ಸಂತ ಜೋಸೆಫ್‌ರ ಸೆಮಿನರಿ, ಜೆಪ್ಪುನಲ್ಲಿ ರಾತ್ರಿಯ ಹೊತ್ತು ಕೆಲಸ ಮಾಡುವುದರಿಂದ ದಿನದ ಖರ್ಚು ಹಾಗೂ ವಸತಿ ಸೆಮಿನರಿ ಜೀವನಿಗೆ ನೀಡಿದೆ. ತನ್ನ ಸ್ವಂತ ಖರ್ಚಿನಲ್ಲೇ ಬಿ.ಕಾಂ ಮಾಡಿದ್ದೇನೆ ಎಂದು ಗುರಿ ಸಾಧಿಸಿದ ಬಗ್ಗೆ ಜೀವನ್ ಮಾಹಿತಿ ನೀಡಿದ್ದಾರೆ ಸಿಒಡಿಪಿಗೆ ಕೃತಜ್ಞತೆಯನ್ನು ಹೇಳಿದ್ದಾರೆ.

**ಕೋಷ್ಟಕ–೧೬: ಸಿಒಡಿಪಿಯ ವಿದ್ಯಾರ್ಥಿ ಸಾಲ ಯೋಜನೆಯಿಂದ ಮುಂದಿನ ಶಿಕ್ಷಣಕ್ಕೆ ಸಕಾಲದಲ್ಲಿ ಅನುಕೂಲ**

ಸಿಒಡಿಪಿಯ ವಿದ್ಯಾರ್ಥಿ ಸಾಲ ಯೋಜನೆಯಿಂದ ಎಷ್ಟು ಮಂದಿಗೆ ಮುಂದಿನ ವ್ಯಾಸಂಗ ಮಾಡಲು ಸಕಾಲದಲ್ಲಿ ಅನುಕೂಲವಾಯಿತು ಎಂದು ತಿಳಿಯಲು ಈ ಪ್ರಶ್ನೆಯನ್ನು ಕೇಳಲಾಗಿದೆ. ಅದರ ಮಾಹಿತಿ ಈ ಕೆಳಗಿನಂತಿದೆ.

೯೦ ಜನ ಮಾಹಿತಿದಾರರಲ್ಲಿ ೫೮ ಜನರು ಮುಂದಿನ ಶಿಕ್ಷಣವನ್ನು ಸಕಾಲದಲ್ಲಿ ಮುಂದುವರಿಸಲು ಸಿಒಡಿಪಿಯ ಸಾಲ ನೆರವಾಯಿತು ಎಂದು ಹೇಳಿದ್ದಾರೆ. ಆದರೆ, ೩೨ ಜನ ಇಲ್ಲವೆಂದು ಹೇಳಿದ್ದಾರೆ.

**ಕೋಷ್ಟಕ–೧೭: ಈ ಸಾಲ ಯೋಜನೆಯಿಂದ ಬೇಗನೆ ಉದ್ಯೋಗ ದೊರೆಯಲು ಸಾಧ್ಯವಾಯಿತು**

ಸಿಒಡಿಪಿಯ ವಿದ್ಯಾರ್ಥಿ ಸಾಲ ಯೋಜನೆಯಿಂದ ಎಷ್ಟು ಜನರಿಗೆ ಬೇಗನೇ ಉದ್ಯೋಗ ದೊರೆತು ಜೀವನದಲ್ಲಿ ಉನ್ನತಿ ಹೊಂದಲು ಸಾಧ್ಯವಾಯಿತು ಎಂಬ ಕುತೂಹಲಕರವಾದ ಪ್ರಶ್ನೆಯನ್ನು ಕೇಳಿ ಮಾಹಿತಿಯನ್ನು ಪಡೆಯಲಾಯಿತು. ೯೦ ಜನ ಮಾಹಿತಿದಾರರಲ್ಲಿ ೭೩ ಜನ ಸಿಒಡಿಪಿಯ ಸಾಲದಿಂದ ಬೇಗನೇ ಉದ್ಯೋಗ ಪಡೆಯಲು ಸಾಧ್ಯವಾಯಿತು ಎಂದು ಹೇಳಿದ್ದಾರೆ ೧೭ ಜನ ಇಲ್ಲವೆಂದು ಹೇಳಿದ್ದಾರೆ. ಸಿಒಡಿಪಿಯ ಸಾಲಯೋಜನೆಯಿಂದ ಶಿಕ್ಷಣ ಮುಗಿದ ಕೂಡಲೇ ಉದ್ಯೋಗ ದೊರೆಯಲು ಸಾಧ್ಯವಾಯಿತು ಎಂದು ವಿದ್ಯಾರ್ಥಿಗಳು ಮಾಹಿತಿ ನೀಡಿದ್ದಾರೆ.

**ಕೋಷ್ಟಕ–೧೮: ಸಿಒಡಿಪಿಯ ಸಾಲ ಯೋಜನೆಯಿಂದ ಶಿಕ್ಷಣ ಪಡೆದು ಯಾವ ರೀತಿಯ ಉದ್ಯೋಗ ಪಡೆದಿದ್ದಾರೆ.**

ಎಷ್ಟು ಜನರು ಯಾವ ಯಾವ ರೀತಿಯ ಉದ್ಯೋಗ ಪಡೆಯುತ್ತಿದ್ದಾರೆ ಎಂಬ ಮಾಹಿತಿಯನ್ನು ತಿಳಿಯುವ ಉದ್ದೇಶದಿಂದ ಈ ಪ್ರಶ್ನೆಯನ್ನು ಕೇಳಲಾಗಿದೆ. ಈ ಕೆಳಗಿನ ಮಾಹಿತಿ ಲಭಿಸಿದೆ.

ಸಿಒಡಿಪಿಯ ಈ ವಿದ್ಯಾರ್ಥಿ ಸಾಲ ಯೋಜನೆಯಿಂದ ಪ್ರಯೋಜನ ಪಡೆದವರು ೯೦ ಜನ ಮಾಹಿತಿಯಲ್ಲಿ ೨೩ ಜನರು ಸ್ವಂತ ಉದ್ಯೋಗವನ್ನು ಮಾಡುತ್ತಿದ್ದರೆ, ೫೩ ಮಂದಿ ಖಾಸಗಿ ಸಂಸ್ಥೆಗಳಲ್ಲಿ ಉದ್ಯೋಗ ಮಾಡುತ್ತಿದ್ದಾರೆ. ೨ ಜನಕ್ಕೆ ಸರಕಾರಿ ಉದ್ಯೋಗ ಸಿಕ್ಕಿದೆ ೧೨ ಮಂದಿಗೆ ಉದ್ಯೋಗ ಇನ್ನು ಸಿಗಬೇಕಾಗಿದೆ ಎಂದು ಮಾಹಿತಿ ನೀಡಿದ್ದಾರೆ.

**ಕೇಸ್ ಸ್ಟಡಿ**

ಪುತ್ತೂರು ತಾಲೂಕಿನ ಮ್ಯಾಕ್ಸಿಮ್ ವೇಗಸ್ ಸಿಒಡಿಪಿಯಿಂದ ಬಿಸಿಎ ಕಲಿಯಲು ವಿದ್ಯಾರ್ಥಿ ಸಾಲವನ್ನು ಪಡೆದಿದ್ದರು. ಬಿಸಿಎ ಮುಗಿಸಿದ ಮಾಕ್ಸಿಮ್‌ನವರಿಗೆ ಉದ್ಯೋಗ ಸಿಗಲು ತುಂಬಾ ಅಲೆದಾಡಬೇಕಾಗಿತ್ತು. ಬಿಸಿಎಗೆ ಉದ್ಯೋಗವಿಲ್ಲ, ಮಾರುಕಟ್ಟೆ ಇಳಿದಿದೆ. ಎಮ್‌ಸಿಎ ಮಾಡಬೇಕು ಎಂಬ ಉತ್ತರ ಸಿಕ್ಕಿತ್ತು. ಆದರೆ ಹಿರಿಯ ಮಗನಾದ ಅವರಿಗೆ ಕುಟುಂಬದ ಜವಾಬ್ದಾರಿ ಇತ್ತು. ಅನಿವಾರ್ಯವಾಗಿ ಉದ್ಯೋಗ ತಕ್ಷಣ ಬೇಕಿತ್ತು. ತಾಯಿ ಬೀಡಿಯ ಕೆಲಸ ಮಾಡುತ್ತಿದ್ದು ಒಬ್ಬಳೇ ತಂಗಿ ೯ ಕ್ಲಾಸಿನಲ್ಲಿ ಕಲಿಯುತ್ತಿದ್ದು ಅವಳ ವಿದ್ಯಾಭ್ಯಾಸದ ಜವಾಬ್ದಾರಿ ಮ್ಯಾಕ್ಸಿಮ್‌ನಲ್ಲಿತ್ತು. ತನ್ನ ಗೆಳೆಯರ ಸಹಾಯದಿಂದ ಸುಳ್ಯದಲ್ಲಿ ಕಂಪ್ಯೂಟರ್ ಸರ್ವೀಸ್ ಅಂಗಡಿ ಹಾಕಿ ದುಡಿಯುತ್ತಿದ್ದಾರೆ. ತಟ್ಟನೆ ಸಿಗುವ ಸೇವೆಯಿಂದ ಬಹಳಷ್ಟು ಜನ ಅವರ ಗ್ರಾಹಕರಾಗಿದ್ದಾರೆ. ಸಿಒಡಿಪಿಯ ಸಾಲವನ್ನು ಮರುಪಾವತಿಸಿ ಮನೆಯ ಜವಾಬಾರಿಯನ್ನು ಹೊರುತ್ತಿದ್ದಾರೆ. ಸಿಒಡಿಪಿ ಸಾಲಕ್ಕೆ ಅವರು ಕೃತಜ್ಞತೆಯನ್ನು ಹೇಳಿದ್ದಾರೆ.

**ಕೋಷ್ಟಕ–೧೯: ಸಿಒಡಿಪಿಯ ಸಾಲಯೋಜನೆಯಿಂದ ಕಲಿತ ವಿದ್ಯಾರ್ಥಿಗಳಿಗೆ ಹೊರದೇಶದಲ್ಲಿ ಉದ್ಯೋಗ**

ಸಿಒಡಿಪಿಯ ಸಾಲದಿಂದ ಶಿಕ್ಷಣ ಪಡೆದು ಎಷ್ಟು ಮಂದಿ ಹೊರದೇಶದಲ್ಲಿ ಉದ್ಯೋಗ ಗಿಟ್ಟಿಸಿದ್ದರೆ ಎಂಬ ಮಾಹಿತಿಗೋಸ್ಕರ ಈ ಪ್ರಶ್ನೆಯನ್ನು ಕೇಳಲಾಗಿದೆ. ಈ ಕೆಳಗಿನ ಮಾಹಿತಿ ಸಿಕ್ಕಿದೆ.

೯೦ ಜನ ಮಾಹಿತಿದಾರರಿಂದ ಮಾಹಿತಿ ಪಡೆದಾಗ ಹೀಗೆ ವಿವರ ಸಿಕ್ಕಿದೆ. ೮೧ ಜನರು ಸ್ವಂತ ದೇಶದಲ್ಲೇ ಉದ್ಯೋಗ ಮಾಡುತ್ತಿದ್ದಾರೆ ಎಂಬ ಮಾಹಿತಿ ದೊರೆತಿದೆ. ೦೯ ಜನ ಅಂದರೆ (೧೦%) ಹೊರದೇಶದಲ್ಲಿ ಉದ್ಯೋಗ ಗಿಟ್ಟಿಸಿಕೊಂಡಿದ್ದಾರೆ ಎಂಬ ಮಾಹಿತಿ ನೀಡಿದ್ದಾರೆ. ನರ್ಸಿಂಗ್ ಹಾಗೂ ಹೋಟೆಲ್ ಮೆನೇಜ್‌ಮೆಂಟ್ ಕಲಿತ ವಿದ್ಯಾರ್ಥಿಗಳಿಗೆ ಹೊರದೇಶದಲ್ಲಿ ಉದ್ಯೋಗ ಸಿಕ್ಕಿದೆ ಎಂದು ಮಾಹಿತಿ ಇದೆ.

**ಕೋಷ್ಟಕ–೨೦: ಸಿಒಡಿಪಿಯ ಸಾಲಯೋಜನೆ ಮನೆಯ ಒಟ್ಟಾರೆ ಅಭಿವೃದ್ಧಿಗೆ ಸಹಾಯ**

ಸಿಒಡಿಪಿಯ ಸಾಲ ಯೋಜನೆ ಯಾವ ರೀತಿಯಲ್ಲಿ ಸಮೂದಾಯದ ಅಭಿವೃದ್ಧಿಗೆ ಸಹಾಯವಾಗಿ ಒಟ್ಟಾರೆ ಅಭಿವೃದ್ಧಿಗೆ ಪೂರಕವಾಗಿದೆಯೇ ಎಂಬ ಮಾಹಿತಿಗೋಸ್ಕರ ಈ ಪ್ರಶ್ನೆಯನ್ನು ಕೇಳಲಾಗಿದೆ.

ಅವರ ಮಾಹಿತಿಯನ್ನು ೯೦ ಜನ ಮಾಹಿತಿದಾರರಲ್ಲಿ ೮೪ ಜನರು ಸಿಒಡಿಪಿಯ ವಿದ್ಯಾರ್ಥಿ ಸಾಲದಿಂದ ಮನೆಯ ಅಭಿವೃದ್ಧಿಯಾಗಿವೆ ಎಂದು ಮಾಹಿತಿ ನೀಡಿದ್ದಾರೆ. ಕೇವಲ ೦೬ ಜನರು ಇಲ್ಲ ಎಂಬ ಮಾಹಿತಿಯನ್ನು ನೀಡಿದ್ದಾರೆ.

**ಕೇಸ್‌ಸ್ಟಡಿ**

ಮಂಗಳೂರು ಜಿಲ್ಲೆಯ ಬಂಟ್ವಾಳ ತಾಲೂಕಿನ ಸೊರ್ನಾಡು ಗ್ರಾಮದ ಮೈಕಲ್ ಪಿಂಟೋರವರಿಗೆ ತನ್ನ ಮಗನ ಶಿಕ್ಷಣಗೋಸ್ಕರ ಸ್ವಲ್ಪ ಹಣವನ್ನು ಕೂಡಿ ಇಟ್ಟಿದ್ದರು. ಸಣ್ಣ ಕೃಷಿಕರಾಗಿದ್ದ ಅವರಿಗೆ ಕೃಷಿಯೇ ಮುಖ್ಯ ಆದಾಯವಾಗಿತ್ತು. ಇತ್ತೀಚೆಗೆ ಅವರ ಬಾವಿಯಲ್ಲಿ ನೀರು ಬತ್ತಿದ ಕಾರಣ ಕೃಷಿಗೆ ಬಹಳ ಅನಾನುಕೂಲವಾಗಿ ಅಡಿಕೆ ಗಿಡಗಳು ಕೆಂಪಾಗಿ ಸಾಯುವ ಸ್ಥಿತಿಯಲ್ಲಿದ್ದವು. ಆದರೆ ಪಿಯುಸಿ ಮುಗಿಸಿದ ಮಗನಿಗೆ ಇಂಜಿನಿಯರಿಂಗ್ ವಿದ್ಯಾಭ್ಯಾಸಗೋಸ್ಕರ ಇಟ್ಟ ಹಣದಿಂದ ಬೋರ್‌ವೆಲ್ ತೆಗೆದರೆ ಅವರ ಆಶೆ ಹಾಗೂ ಮಗನ ಆಶೆಯೂ ಈಡೇರುವುದಿಲ್ಲ ಎಂಬ ಚಿಂತನೆಯಲ್ಲಿರುವಾಗ, ಭಾನುವಾರ ಪೂಜೆಯ ಸಮಯದಲ್ಲಿ ಸಿಒಡಿಪಿಯ ವಿದ್ಯಾರ್ಥಿ ಸಾಲದ ಬಗ್ಗೆ ಪ್ರಕಟನೆವಿತ್ತು. ತಕ್ಷಣವೇ ಮುಖ್ಯ ಗುರುವಿನ ಮಾರ್ಗದರ್ಶನದಲ್ಲಿ ಸಿಒಡಿಪಿಯ ಸಾಲಕ್ಕೆ ಅರ್ಜಿ ಹಾಕಿದ್ದರು. ಸಾಲ ದೊರೆತೊಡನೆ ಮಗನಿಗೆ ಇಂಜಿನಿಯರಿಂಗ್ ಶಿಕ್ಷಣಕ್ಕೆ ಎಂದು ಕೂಡಿ ಇಟ್ಟ ಹಣದಿಂದ ಬೋರ್‌ವೆಲ್ ತೆಗೆಸಿದರು. ಕೃಷಿಯೂ ಸಮೃದ್ಧಿಯಾಯಿತು, ಮಗನ ಶಿಕ್ಷಣವೂ ಆಯಿತು ಎಂದು ಮನೆಯ ಒಟ್ಟಾರೆ ಅಭಿವೃದ್ಧಿಗೆ ಸಿಒಡಿಪಿಯ ಸಾಲ ಪ್ರಯೋಜನವಾಯಿತು ಎಂದು ಮೈಕಲ್ ಮಾಹಿತಿ ನೀಡಿದ್ದಾರೆ.

**ಕೋಷ್ಟಕ–೨೧: ತನಗೆ ಸಿಒಡಿಪಿಯ ಸಾಲ ಸಿಕ್ಕಿದ್ದರಿಂದ ಪೋಷಕರಿಗೆ ಉಳಿದ ತಮ್ಮ–ತಂಗಿಗೆ ಶಿಕ್ಷಣ ನೀಡಲು ಸಾಧ್ಯ**

ಸಿಒಡಿಪಿಯ ಸಾಲ ಯೋಜನೆಯ ಸಹಾಯ ಪಡೆದಿದ್ದರಿಂದ ಎಷ್ಟು ಪೋಷಕರಿಗೆ ಅವರ ಉಳಿದ ಮಕ್ಕಳಿಗೆ ಶಿಕ್ಷಣಕ್ಕೆ ನೀಡಲು ಅನುಕೂಲವಾಗಿದೆ ಎಂಬ ಪ್ರಶ್ನೆಗೆ ಉತ್ತರ ಸಿಗುವ ಕಾರಣಗೋಸ್ಕರ ಈ ಪ್ರಶ್ನೆಯನ್ನು ಕೇಳಲಾಗಿದೆ ಅವರು ಕೊಟ್ಟ ಮಾಹಿತಿಯ ಪ್ರಕಾರ ಸಿಒಡಿಪಿಯ ಫಲಾನುಭವಿಗಳಿಗೆ ಶಿಕ್ಷಣಕ್ಕೆ ಸಾಲ ದೊರೆತ ಕಾರಣ ಪೋಷಕರಿಗೆ ಉಳಿದ ತನ್ನ ಮಕ್ಕಳನ್ನು ಕಲಿಸಲು ಅನುಕೂಲವಾಯಿತು ಎಂದು ತಿಳಿಯಲು ೯೦ ಜನ ವಿದ್ಯಾರ್ಥಿಗಳಲ್ಲಿ ಮಾಹಿತಿ ಪಡೆದಾಗ ೮೧ (೯೦%) ಮಾಹಿತಿದಾರರು ಅನುಕೂಲವಾಗಿದೆ ಎಂದು ಮಾಹಿತಿ ನೀಡಿದ್ದಾರೆ. ಆದರೆ ೯ ಜನ (೧೦%) ವಿದ್ಯಾರ್ಥಿಗಳು ಹಾಗೇನೂ ಇಲ್ಲ ಎಂದು ಮಾಹಿತಿ ನೀಡಿದ್ದಾರೆ.

**ಕೋಷ್ಟಕ–೨೨: ಸಿಒಡಿಪಿಯ ಸಾಲ ಯೋಜನೆಯಿಂದ ಪ್ರೇರಿತರಾದ ತಾವು ಬೇರೆ ಬಡ ವಿದ್ಯಾರ್ಥಿಗಳಿಗೆ ಸಹಾಯ ಮಾಡುತ್ತೀರಾ?**

ಸಿಒಡಿಪಿಯು ಸಮುದಾಯದ ಬಡವಿದ್ಯಾರ್ಥಿಗಳಿಗೆ ವಿದ್ಯಾರ್ಥಿ ಸಾಲ ಯೋಜನೆಯ ಮೂಲಕ ಸಹಾಯ ಮಾಡುತ್ತಿತ್ತು. ಫಲಾನುಭವಿಗಳು ಇತರ ತನ್ನ ಹಾಗೇನೇ ಇದ್ದ ವಿದ್ಯಾರ್ಥಿಗಳಿಗೆ ಸಿಒಡಿಪಿಯಿಂದ ಪ್ರೇರಿತರಾಗಿ ಸಹಾಯ ಮಾಡುತ್ತೀರಾ ಎಂಬ ಕುತೂಹಲಕರವಾದ ಪ್ರಶ್ನೆಯನ್ನು ಕೇಳಿ ಮಾಹಿತಿ ಪಡೆಯಲಾಗಿದೆ.

ಈ ಮೇಲಿನ ಕೋಷ್ಟಕದ ಪ್ರಕಾರ ೯೦ ಮಾಹಿತಿದಾರರನ್ನೊಳಗೊಂಡಿದ್ದು ಅವರಲ್ಲಿ ೨೦ ಜನರು ಎಂದರೆ ೨೨.೨೨ ಪ್ರತಿಶತ ಜನರು ಬಡಮಕ್ಕಳಿಗೆ ಸಹಾಯ ಮಾಡುತ್ತೇನೆ ಎಂದು ಮಾಹಿತಿ ನೀಡಿದ್ದಾರೆ. ೧೨ ಜನರು ಅಂದರೆ ೧೩.೩೩ ಪ್ರತಿಶತ ಜನರು ಗೊತ್ತಿಲ್ಲ ಎಂದು ಮಾಹಿತಿ ನೀಡಿದ್ದಾರೆ. ಇನ್ನುಳಿದ ೮ ಜನರು ಅಂದರೆ ೮.೮೮% ಪ್ರತಿಶತ ಜನರು ಈ ಬಗ್ಗೆ ಚಿಂತಿಸಿಲ್ಲ ಎಂದು ಮಾಹಿತಿ ನೀಡಿದ್ದಾರೆ.

ಸಿಒಡಿಪಿಯ ವಿದ್ಯಾರ್ಥಿ ಸಾಲ ಯೋಜನೆಯ ಅಧ್ಯಾಯವನ್ನು ಮಾಡಲು ಈ ಮೇಲಿನ ಅಂಕಿಅಂಶಗಳನ್ನು ಬಳಸಿ ಮಾಹಿತಿ ಪಡೆದಿದ್ದು, ಅದರ ಸಾಧನೆ ಹಾಗೂ ಭಾದಕಗಳನ್ನು ವಿವರವಾಗಿ ಚರ್ಚಿಸಲು, ಈ ಅಂಕಿಅಂಶಗಳು ಬಹಳ ಉಪಯೋಗವಾಗಿವೆ. ಮುಂದಿನ ಅಧ್ಯಾಯದಲ್ಲಿ ಈ ಅಂಕಿಅಂಶಗಳ ಮೇಲೆ ವಿಶ್ಲೇಷಣೆ ಮಾಡಿ ಸಮಾರೋಪ ತೀರ್ಮಾನಕ್ಕೆ ಬರಲಾಗುವುದು.

# ಅಂಕಿಅಂಶಗಳ ಕೋಷ್ಟಕಗಳು

**ಕೋಷ್ಟಕ – ೧**

| ಕ್ರ.ಸಂ. | ವಿಷಯ | ಗಂಡು/ಹೆಣ್ಣು | ಒಟ್ಟು | ಒಟ್ಟು ಸಮಯ |
|---|---|---|---|---|
| ೧ | B.Com | ೫ ಹೆಣ್ಣು ೩ ಗಂಡು | ೮ | ೮.೮% |
| ೨ | B.CA | ೩ ಹೆಣ್ಣು ೨ ಗಂಡು | ೫ | ೫.೫% |
| ೩ | B.ED | ೬ ಹೆಣ್ಣು ೪ ಗಂಡು | ೧೦ | ೧೧.೧೧% |
| ೪ | B.A. | ೩ ಹೆಣ್ಣು +೧ ಗಂಡು | ೪ | ೪.೪% |
| ೫ | BBM | ೨ ಹೆಣ್ಣು ೧ ಗಂಡು | ೩ | ೬.೬% |
| ೬ | B.SC. | ೬ ಹೆಣ್ಣು ೩ ಗಂಡು | ೯ | ೧೦.೦% |
| ೭ | NURSING | ೧೦ ಹೆಣ್ಣು ೨ ಗಂಡು | ೧೨ | ೧೩.೩೩% |
| ೮ | B.H.M | ೩ ಗಂಡು | ೩ | ೩.೩೩% |
| ೯ | B.A.L.L.B. | ೧ ಹೆಣ್ಣು ೧ ಗಂಡು | ೨ | ೨.೨೨% |
| ೧೦ | M.COM | ೮ ಹೆಣ್ಣು ೪ ಗಂಡು | ೧೨ | ೧೩.೩೩% |
| ೧೧ | M.A. | ೬ ಹೆಣ್ಣು + ೩ ಗಂಡು | ೯ | ೧೦.೦% |
| ೧೨ | B.E. | ೫ ಹೆಣ್ಣು ೫ ಗಂಡು | ೧೦ | ೧೧.೧೧% |
| ೧೩ | M.B.B.S | ೨ ಹೆಣ್ಣು ೧ ಗಂಡು | ೩ | ೩.೩೩% |

**ಕೋಷ್ಟಕ –೨**

| ಕ್ರ.ಸಂ. | ವಿಷಯ | ಪ್ರಯೋಜನ ಪಡೆದ ವಿದ್ಯಾರ್ಥಿಗಳು | |
|---|---|---|---|
| | | ಪುನರ್ವರ್ತಿತ | ಹೊಸತು |
| ೧ | ಸ್ನಾತಕ | ೨೦೨ | ೧೫೦ |
| ೨ | ಸ್ನಾತಕೋತ್ತರ | ೯೪ | ೧೪೩ |
| ೩ | ಇಂಜಿನಿಯರಿಂಗ್ | ೧೮೫ | ೧೦೬ |
| ೪ | ನರ್ಸಿಂಗ್ | ೭೯ | ೬೦ |
| ೫ | ಮೆಡಿಕಲ್ | ೧೯ | ೯ |
| ೬ | ಡಿಪ್ಲೋಮಾ | ೨೬ | ೨೮ |

**ಕೋಷ್ಟಕ – ೩**

| ಕ್ರ.ಸಂ. | ವಿಷಯ | ಪ್ರಯೋಜನ ಪಡೆದ ವಿದ್ಯಾರ್ಥಿಗಳು | |
|---|---|---|---|
| | | ಪುನರ್ವರ್ತಿತ | ಹೊಸತು |
| ೧ | ಚರ್ಚಿನಿಂದ | ೪೯ | ೫೪.೪% |
| ೨ | ಶಾಲಾ–ಕಾಲೇಜಿನಿಂದ | ೨೧ | ೨೩.೩% |
| ೩ | ಗೆಳೆಯರಿಂದ | ೦೭ | ೭.೭% |
| ೪ | ಕುಟುಂಬದವರಿಂದ | ೧೦ | ೧೧.೧% |
| ೫ | ಪತ್ರಿಕೆ | ೦೩ | ೩.೩% |

ಕೋಷ್ಟಕ – ೪

| ಸಾಲ ಪಡೆಯಲು ತಗಲಿದ ದಿನಗಳು | | ಮಾಹಿತಿದಾರರ ಸಂಖ್ಯೆ | ಪ್ರತಿಶತ |
|---|---|---|---|
| ೧. | ಒಂದು ತಿಂಗಳು | ೮೦ | ೮೮.೮೮ |
| ೨ | ಒಂದು ತಿಂಗಳಿಗಿಂತಲೂ ಜಾಸ್ತಿ | ೧೦ | ೧೧.೧೧ |
| | ಒಟ್ಟು | ೯೦ | ೧೦೦ |

ಕೋಷ್ಟಕ – ೫

| ಸಾಲ ಪಡೆಯುವಾಗ ಎಲ್ಲ ದಾಖಲೆಗಳನ್ನು ಸಿಒಡಿಪಿ ಕೇಳಿಕೊಂಡಿದೆ | ಮಾಹಿತಿದಾರರ ಸಂಖ್ಯೆ | ಪ್ರತಿಶತ |
|---|---|---|
| ಹೌದು | ೮೮ | ೯೭.೭೭ |
| ಇಲ್ಲ | ೨ | ೨.೨೨ |
| ಒಟ್ಟು | ೯೦ | ೧೦೦ |



ಕೋಷ್ಟಕ – ೬

| ಸಾಲ ಪಡೆಯಲು ಪಾಲಕರ ಪ್ರೋತ್ಸಾಹ | ಮಾಹಿತಿದಾರರ ಸಂಖ್ಯೆ | ಪ್ರತಿಶತ |
|---|---|---|
| ಇದೆ | ೬೭ | ೭೪.೪೪ |
| ಇಲ್ಲ | ೨೩ | ೨೫.೫೫ |
| ಒಟ್ಟು | ೯೦ | ೧೦೦ |

ಕೋಷ್ಟಕ – ೭

| ಸಿಒಡಿಪಿಯ ಸಾಲ ಯಾರು ಪಾವತಿ ಮಾಡುತ್ತಾರೆ | ಮಾಹಿತಿದಾರರ ಸಂಖ್ಯೆ | ಪ್ರತಿಶತ |
|---|---|---|
| ಸ್ವಂತ ದುಡಿದು | ೮೦ | ೮೮.೮೮ |
| ಮನೆಯವರು | ೬ | ೬.೬೬ |
| ಚಿಂತಿಸಿಲ್ಲ | ೪ | ೪.೪೪ |
| ಒಟ್ಟು | ೯೦ | ೧೦೦ |

ಕೋಷ್ಟಕ – ೮

| ಸಿಡಿಪಿಯ ಸಾಲ ಯೋಜನೆ ಬ್ಯಾಂಕಿನ ಸಾಲ ಯೋಜನೆಗಿಂತ ಸುಲಭ | ಮಾಹಿತಿದಾರರ ಸಂಖ್ಯೆ | ಪ್ರತಿಶತ |
|---|---|---|
| ಸುಲಭ | ೯೦ | ೧೦೦% |
| ಸಮವಾಗಿಲ್ಲ | – | – |
| ಒಟ್ಟು | ೯೦ | ೧೦೦ |

ಕೋಷ್ಟಕ – ೯

| ಸಾಲ ಯೋಜನೆಯಲ್ಲಿ ಪಕ್ಷಪಾತ | ಮಾಹಿತಿದಾರ ಸಂಖ್ಯೆ | ಪ್ರತಿಶತ |
|---|---|---|
| ಇಲ್ಲ | ೮೮ | ೯೭.೭೭% |
| ಇದೆ | ೨ | ೨.೨೨% |
| ಒಟ್ಟು | ೯೦ | ೧೦೦ |

ಕೋಷ್ಟಕ – ೧೦

| ಸಾಲ ಯೋಜನೆಯಲ್ಲಿ ಪ್ರಭಾವಿ ವ್ಯಕ್ತಿಗಳ ಪ್ರಭಾವ | ಮಾಹಿತಿದಾರರ ಸಂಖ್ಯೆ | ಪ್ರತಿಶತ |
|---|---|---|
| ಇದೆ | ೬ | ೬.೬೬ |
| ಇಲ್ಲ | ೮೪ | ೯೩.೩೩ |
| ಒಟ್ಟು | ೯೦ | ೧೦೦ |

ಕೋಷ್ಟಕ – ೧೧

| ಸಿಡಿಪಿಯು ಸಾಲ ನೀಡುವಾಗ ಉತ್ತಮ ಸೇವೆ ನೀಡಿದೆ | ಮಾಹಿತಿದಾರ ಸಂಖ್ಯೆ | ಪ್ರತಿಶತ |
|---|---|---|
| ಹೌದು | ೮೭ | ೯೬.೬೬% |
| ಇಲ್ಲ | ೩ | ೩.೩೩% |
| ಒಟ್ಟು | ೯೦ | ೧೦೦ |

ಕೋಷ್ಟಕ – ೧೨

| ಶಿಫಾರಸ್ಸು ಮಾಡುವರೇ | ಮಾಹಿತಿದಾರರ ಸಂಖ್ಯೆ | ಪ್ರತಿಶತ |
|---|---|---|
| ಹೌದು | ೮೮ | ೯೭.೭೭ |
| ಇಲ್ಲ | ೦೨ | ೨.೨೨ |
| ಒಟ್ಟು | ೯೦ | ೧೦೦% |

ಕೋಷ್ಟಕ – ೧೩

| ಮರುಪಾವತಿಸುವ ಅವಧಿ | ಮಾಹಿತಿದಾರರ ಸಂಖ್ಯೆ | ಪ್ರತಿಶತ |
|---|---|---|
| ಜಾಸ್ತಿ | ೧೦ | ೧೧.೧೧ |
| ಕಡಿಮೆ | ೫೦ | ೫೫.೫೫ |
| ಸಾಕಾಗುವಷ್ಟು ಅವಕಾಶ | ೩೦ | ೩೩.೩೩ |
| ಒಟ್ಟು | ೯೦ | ೧೦೦ |

ಕೋಷ್ಟಕ – ೧೪

| ವಿದ್ಯಾರ್ಥಿಗಳಿಂದ ಸಿಒಡಿಪಿ ಏನಾದರೂ ಅಪೇಕ್ಷಿಸುತ್ತಿದೆಯೇ? | ಮಾಹಿತಿದಾರ ಸಂಖ್ಯೆ | ಪ್ರತಿಶತ |
|---|---|---|
| ಹೌದು | ೯೦ | ೧೦೦ |
| ಇಲ್ಲ | ೦ | ೦ |
| ಒಟ್ಟು | ೯೦ | ೧೦೦ |

ಕೋಷ್ಟಕ – ೧೫

| ಸ್ವತಂತ್ರ ಪದವಿ ಪಡೆಯಲು ಸಾಧ್ಯವಾಯಿತು | ಮಾಹಿತಿದಾರರ ಸಂಖ್ಯೆ | ಪ್ರತಿಶತ |
|---|---|---|
| ಹೌದು | ೬೨ | ೬೮.೮೮ |
| ಇಲ್ಲ | ೨೮ | ೩೧.೧೧ |
| ಒಟ್ಟು | ೯೦ | ೧೦೦ |

ಕೋಷ್ಟಕ – ೧೬

| ಸಿಒಡಿಪಿಯ ವಿದ್ಯಾರ್ಥಿ ಸಾಲ ಯೋಜನೆಯಿಂದ ಮುಂದಿನ ಶಿಕ್ಷಣಕ್ಕೆ ಸಕಾಲದಲ್ಲಿ ಅನುಕೂಲ ಮುಂದಿನ ಶಿಕ್ಷಣಕ್ಕೆ ಸಾಧ್ಯವಾಯಿತು | ಮಾಹಿತಿದಾರರ ಸಂಖ್ಯೆ | ಪ್ರತಿಶತ |
|---|---|---|
| ಹೌದು | ೫೮ | ೬೪.೪೪% |
| ಇಲ್ಲ | ೨ | ೩೫.೫೫% |
| ಒಟ್ಟು | ೯೦ | ೧೦೦ |

ಕೋಷ್ಟಕ – ೧೭

| ಬೇಗನೇ ಉದ್ಯೋಗ ಪಡೆಯಲು ಸಾಧ್ಯವಾಯಿತು | ಮಾಹಿತಿದಾರರ ಸಂಖ್ಯೆ | ಪ್ರತಿಶತ |
|---|---|---|
| ಹೌದು | ೭೩ | ೮೧.೧೧ |
| ಇಲ್ಲ | ೧೭ | ೧೮.೮೮ |
| ಒಟ್ಟು | ೯೦ | ೧೦೦ |

ಕೋಷ್ಟಕ – ೧೮

| | ಯಾವ ರೀತಿಯ ಉದ್ಯೋಗ | ಮಾಹಿತಿದಾರರ ಸಂಖ್ಯೆ | ಪ್ರತಿಶತ |
|---|---|---|---|
| ೧ | ಸ್ವಂತ ಉದ್ಯೋಗ | ೨೩ | ೨೫.೫೫ |
| ೨ | ಖಾಸಗಿ ಸಂಸ್ಥೆಗಳಲ್ಲಿ ಉದ್ಯೋಗ | ೫೩ | ೫೮.೮೮ |
| ೩ | ಸರಕಾರಿ ಉದ್ಯೋಗ | ೨ | ೨.೨೨ |
| ೪ | ಉದ್ಯೋಗವಿಲ್ಲ | ೧೨ | ೧೩.೩೩ |
| | ಒಟ್ಟು | ೯೦ | ೧೦೦ |

ಕೋಷ್ಟಕ – ೧೯

| ಉದ್ಯೋಗ ಮಾಡುವ ದೇಶ | ಮಾಹಿತಿದಾರರ ಸಂಖ್ಯೆ | ಪ್ರತಿಶತ |
|---|---|---|
| ಸ್ವಂತ ಉದ್ಯೋಗ | ೮೧ | ೯೦ |
| ಹೊರದೇಶ | ೦೯ | ೧೦ |
| ಒಟ್ಟು | ೯೦ | ೧೦೦ |

**ಕೋಷ್ಟಕ – ೨೦**

| ಮನೆಯ ಒಟ್ಟಾರೆ ಅಭಿವೃದ್ಧಿಯಾಗಿದೆ | ಮಾಹಿತಿದಾರರ ಸಂಖ್ಯೆ | ಪ್ರತಿಶತ |
|---|---|---|
| ಹೌದು | ೮೪ | ೯೩.೩೩ |
| ಇಲ್ಲ | ೦೬ | ೬.೬೬ |
| ಒಟ್ಟು | ೯೦ | ೧೦೦ |

**ಕೋಷ್ಟಕ – ೨೧**

| ಸಿಒಡಿಪಿಯ ಸಾಲ ಸಿಕ್ಕಿದರಿಂದ ತಮ್ಮ-ತಂಗಿಗೆ ಕಲಿಸಲು ಪೋಷಕರಿಗೆ ಸುಲಭವಾಯಿತು | ಮಾಹಿತಿದಾರರ ಸಂಖ್ಯೆ | ಪ್ರತಿಶತ |
|---|---|---|
| ಹೌದು | ೮೧ | ೯೦% |
| ಹಾಗೇನಿಲ್ಲ | ೯ | ೧೦% |
| ಒಟ್ಟು | ೯೦ | ೧೦೦ |

**ಕೋಷ್ಟಕ – ೨೨**

| ಸಿಒಡಿಪಿಯಿಂದ ಪ್ರೇರಿತರಾಗಿ ಬೇರೆ ಬಡಮಕ್ಕಳಿಗೆ ಸಹಾಯ | ಮಾಹಿತಿದಾರರ ಸಂಖ್ಯೆ | ಪ್ರತಿಶತ |
|---|---|---|
| ಮಾಡುತ್ತೇನೆ | ೭೦ | ೭೭.೭೭ |
| ಗೊತ್ತಿಲ್ಲ | ೧೨ | ೧೩.೮೩ |
| ಚಿಂತಿಸಿಲ್ಲ | ೮ | ೮.೮೮ |
| ಒಟ್ಟು | ೯೦ | ೧೦೦ |

## ಅಧ್ಯಾಯ –೪

## ಫಲಿತಾಂಶಗಳು, ಸಲಹೆಗಳು, ಉಪಸಂಹಾರ

### ೪.೧ ಸಾರಾಂಶ

ಖಂಡಿತವಾಗಿಯೂ ಶಿಕ್ಷಣವೂ ಎಲ್ಲರಿಗೆ ಬೇಕು. ಇದೊಂದು ವೈಯಕ್ತಿಕ ಗಳಿಕೆ. ನಮ್ಮ ಜೀವನದಲ್ಲಿ ಶಿಕ್ಷಣದ ಪಾತ್ರ ಅಮೋಘವಾಗಿದ್ದು, ಆಧುನಿಕ ಬೆಳವಣಿಗೆಯಲ್ಲಿ ಶಿಕ್ಷಣವಿಲ್ಲದೆ ಸಮಾಜದಲ್ಲಿ ಬೆಲೆಯೇ ಇಲ್ಲದಾಗಿದೆ. ಶಿಕ್ಷಣದಿಂದ ಒಬ್ಬನ ಒಟ್ಟಾರೆ ಅಭಿವೃದ್ಧಿ ಸಾಧ್ಯ. ಶಿಕ್ಷಣ ಮತ್ತು ಆರ್ಥಿಕ ಅಭಿವೃದ್ಧಿ, ರಾಜಕೀಯ, ಸಾಮಾಜಿಕ ಮತ್ತು ಸಾಂಸ್ಕೃತಿಕಗಳ ನಡುವೆ ನೇರವಾದ ಮತ್ತು ನಿಕಟವಾದ ಸಂಬಂಧವಿದೆ. ಆದ್ದರಿಂದ ಶಿಕ್ಷಣವು ಸಾಮಾಜಿಕ ಮತ್ತು ಆರ್ಥಿಕ ಅಭಿವೃದ್ಧಿಗೆ ಪೂರಕವಾಗಿದೆ ಎಂದು ಭಾವಿಸಲಾಗಿದೆ. ಇಂತಹ ಸನ್ನಿವೇಶದಲ್ಲಿರುವಾಗ ಆಧುನಿಕ ಜಗತ್ತಿನ ಸವಾಲುಗಳನ್ನು ಸ್ವೀಕರಿಸಲು ಶಿಕ್ಷಣವನ್ನು ಸಾಲ ತೆಗೆದು ಆದರೂ ಮಾಡುತ್ತಾರೆ. ಅಂತೆಯೇ ಶಿಕ್ಷಣವನ್ನು ಪೂರೈಸಲು ಆರ್ಥಿಕ ಅಡಚಣೆವಿರುವ ಸಾವಿರಾರು ಪೋಷಕರಿಗೆ, ಮಕ್ಕಳಿಗೆ 'ಸಾಲಯೋಜನೆ' ಎಂಬ ಪರಿಕಲ್ಪನೆ ವರದಾನವಾಗಿದೆ. ಸಾಲಯೋಜನೆಯನ್ನು ಕುಟುಂಬದ ಸದಸ್ಯರು, ಸಂಘ–ಸಂಸ್ಥೆಗಳು ಸಹಕಾರಿ ಬ್ಯಾಂಕುಗಳು ರಾಷ್ಟ್ರೀಕೃತ ಬ್ಯಾಂಕುಗಳು ಎನ್‌ಜಿವೊಗಳು ಸಹಕಾರಿ ಬ್ಯಾಂಕುಗಳು ರಾಷ್ಟ್ರೀಕೃತ ಬ್ಯಾಂಕುಗಳು, ಎನ್‌ಜಿವೊಗಳು ನೀಡುತ್ತ ಬಂದಿವೆ. ಆದರೆ, ಅವುಗಳ ಬಡ್ಡಿದರ ಹಾಗೂ ದಾಖಲೆಗಳು ಒದಗಿಸುವಾಗ ಸಾವಿರಾರು ವಿದ್ಯಾರ್ಥಿಗಳು ಈ ಸಾಲದಿಂದ ದೂರ ಸರಿಯುತ್ತಾರೆ. ಸಮುದಾಯದ ವಿದ್ಯಾರ್ಥಿಗಳಿಗೆ ಸುಲಭವಾಗಿ ಹಾಗೂ ಬೇಗನೇ ಸಾಲ ದೊರೆಯುವಂತೆ ಆಗಬೇಕು ಎಂಬ ಪರಿಕಲ್ಪನೆಯಿಂದ ಸಮುದಾಯ ಸರ್ಕಾರೇತರ ಸಂಸ್ಥೆ ಸಿ.ಒ.ಡಿ.ಪಿ. ಸಮುದಾಯ ವಿದ್ಯಾರ್ಥಿಗಳಿಗೆ ಬಡ್ಡಿರಹಿತ ಸಾಲವನ್ನು ನೀಡಿ ಅವರು ಜೀವನದಲ್ಲಿ ಉನ್ನತಿ ಸಾಧಿಸುವಂತೆ ಪ್ರೋತ್ಸಾಹಿಸಿದೆ.

ಸರ್ಕಾರೇತರ ಸಂಸ್ಥೆ 'ಕೆನರಾ ಅಭಿವೃದ್ಧಿ ಮತ್ತು ಶಾಂತಿ ಸಂಸ್ಥೆ(ರಿ)' ಯ ವಿದ್ಯಾರ್ಥಿ ಸಾಲಯೋಜನೆಯ ಬಗ್ಗೆ ಅಧ್ಯಯನ ಮಾಡಿದ್ದು, ಈ ಅಧ್ಯಾಯದಲ್ಲಿ, ಅಧ್ಯಯನದ ಉದ್ದೇಶ ವ್ಯಾಪ್ತಿ ಹಾಗೂ ಮಹತ್ವವನ್ನು ತಿಳಿಸಲಾಗಿದೆ. ಯಾವ ಎಲ್ಲ ಉದ್ದೇಶಗೋಸ್ಕರ ಈ ಅಧ್ಯಯನವನ್ನು ನಡೆಸಲಾಗಿದೆ ಎಂದು ವಿವರಿಸಿದೆ. ಅಂತೆಯೇ, ಅದರ ಈ ಅಧ್ಯಯನವು ಏಕೆ ಮಹತ್ವಪೂರ್ಣವಾಗಿದೆ ಎಂದು ಹೇಳಲಾಗಿದೆ. ಸಂಸ್ಥೆಯ ಮಿತಿಯು ಉಡುಪಿ, ದ.ಕ. ಹಾಗೂ ಉಡುಪಿ ಜಿಲ್ಲೆಯಲ್ಲಿರುವುದರಿಂದ ಸಂಸ್ಥೆಯ ನೈಜ ಚಿತ್ರಣವನ್ನು ಅರಿಯಲು ಈ ಜಿಲ್ಲೆಗಳ ಚಿತ್ರವನ್ನು ನೀಡಲಾಗಿದೆ. ಉದ್ದೇಶಕ್ಕೆ ಅನುಗುಣವಾಗಿ ಸಾಹಿತ್ಯ ಸಮೀಕ್ಷೆಯ ನಡೆಸಿ ಅದರ ವಿವರವನ್ನು ವಿಶ್ಲೇಷಿಸಿ ಕೇಸ್‌ಸ್ಟಡಿ ಮೂಲಕ ವಿವರಿಸಲಾಗಿದೆ. ಅಂತೆಯೇ ವಿದ್ಯಾರ್ಥಿ ಸಾಲಯೋಜನೆಯ ಸಾಧನೆ–ಬಾದಕಗಳನ್ನು ಅಂಕಿ ಅಂಶಗಳೊಂದಿಗೆ ಚರ್ಚಿಸಲಾಗಿದೆ.

### ೪.೨ ಅಧ್ಯಯನದ ಶೋಧ:

ಸಾಮಾಜಿಕ ಅಭಿವೃದ್ಧಿಯಲ್ಲಿ ಸಿಒಡಿಪಿಯ ಪಾತ್ರ, ವಿದ್ಯಾರ್ಥಿ ಸಾಲ ಯೋಜನೆ ಒಂದು ಅಧ್ಯಯನ ಎಂಬ ವಿಷಯವನ್ನು ಅಧ್ಯಯನಕ್ಕೆ ಕೈಗೊಂಡು ೯೦ ಜನರು ಸಂದರ್ಶಿಸಿ ಪ್ರಶ್ನಾವಳಿಗಳ ಮೂಲಕ ಮಾಹಿತಿ ಪಡೆದು, ಅಧ್ಯಯನದ ಉದ್ದೇಶಗಳಿಗನುಗುಣವಾಗಿ ವಿಶ್ಲೇಷಣ ಮಾಡಲಾಯಿತು.

ಸಿಒಡಿಪಿಯ ವಿದ್ಯಾರ್ಥಿ ಸಾಲ ಯೋಜನೆಗೆ ಸಂಬಂಧಿಸಿದಂತೆ ದೊರೆತ ಫಲಿತಾಂಶಗಳು ಹೀಗಿವೆ.

- ಅಂಕಿ ಅಂಶಗಳನ್ನು ಗಮನಿಸಿದಾಗ ಬಿ.ಕಾಂ. ನರ್ಸಿಂಗ್, ಎಮ್‌ಕಾಂ ಮತ್ತು ಬಿಇಯ ಜಾಸ್ತಿ ವಿದ್ಯಾರ್ಥಿಗಳು ಸಿಒಡಿಪಿಯ ಸಾಲವನ್ನು ಪಡೆದಿರುತ್ತಾರೆ.
- ಸಿಒಡಿಪಿಯ ಸಾಲ ಪಡೆದಿರುವಲ್ಲಿ ಗಂಡು ಮಕ್ಕಳ ಸಂಖ್ಯೆ ಕಡಿಮೆಯಾಗಿದ್ದು ಹೆಣ್ಣು ಮಕ್ಕಳು ಸಂಖ್ಯೆ ಜಾಯ್ತಿಯಾಗಿದೆ. ಕ್ರಿಶ್ಚಿಯನ್ ಸಮುದಾಯದ ಗಂಡುಮಕ್ಕಳು ಉನ್ನತ ಶಿಕ್ಷಣದ ಒಲವುವನ್ನು ಅಷ್ಟೇನೂ ತೋರಿಸುತ್ತಿಲ್ಲ. ಪಿಯುಸಿ ಅಥವಾ ಸ್ನಾತಕ ವ್ಯಾಸಂಗ ಪಡೆದೊಡನೆ ಉದ್ಯೋಗಕ್ಕೆ ಸೇರುತ್ತಾರೆ. ಇದರಿಂದ ಶಿಕ್ಷಣದಲ್ಲಿ ಗಂಡು ಹಾಗೂ ಹೆಣ್ಣು ಮಕ್ಕಳ ಅನುಪಾತದಲ್ಲಿ ತುಂಬ ಅಂತರವಿದೆ. ಅದರಲ್ಲಿಯೂ ಕಾಸರಗೋಡ್ ಜಿಲ್ಲೆಯ ಕ್ರಿಶ್ಚಿಯನ್ ಸಮುದಾಯದ ಗಂಡು–ಹೆಣ್ಣು ಮಕ್ಕಳ ಶಿಕ್ಷಣದಲ್ಲಿ ಜಾಸ್ತಿ ಅಂತರ ಕಾಣುತ್ತಿದೆ.
- 'ಕೆನರ ಅಭಿವೃದ್ಧಿ ಮತ್ತು ಶಾಂತಿ ಸಂಸ್ಥೆ': ತನ್ನ ಪ್ರತಿಷ್ಠಿತ ವಿದ್ಯಾರ್ಥಿ ಸಾಲ ಯೋಜನೆಯ ಮಾಹಿತಿಯನ್ನು ಚರ್ಚೆ, ಶಾಲಾ–ಕಾಲೇಜು ಹಾಗೂ ಪತ್ರಿಕೆಗಳ ಮೂಲಕ ಜನರಿಗೆ ನೀಡುತ್ತಿದೆ. ಚರ್ಚಿನ ಭಾನುವಾರದ ಪೂಜೆಯ ಪ್ರಕಟನೆಯಿಂದ ಮಾಹಿತಿ ಹೆಚ್ಚಿನವರಿಗೆ ಲಭಿಸಿದೆ.
- ಪಟ್ಟಣದಲ್ಲಿ ಕಾನ್ವೆಂಟು ಹಾಗೂ ಚಾಫೆಲ್‌ಗಳು ಜಾಸ್ತಿವಿರುವುದರಿಂದ ಜನರು ಭಾನುವಾರದ ಪೂಜೆಗೆ ತಮ್ಮ ಅಧಿಕೃತ ಚರ್ಚ್‌ಗೆ ಹೋಗದೆ ತಮ್ಮ ಇಷ್ಟದ ಹಾಗೂ ಅನುಕೂಲದ ಕಾನ್ವೆಂಟ್ ಅಥವಾ ಚಾಪೆಲ್‌ಗಳಿಗೆ ಪೂಜೆಗೆ ಹೋಗುತ್ತಾರೆ. ಈ ಕಾನ್ವೆಂಟ್, ಚಾಪೆಲ್‌ಗಳಲ್ಲಿ ಚರ್ಚಿನ ಅಧಿಕೃತವದ ಭಾನುವಾರದ ಪ್ರಕಟಣೆವಿರುವುದಿಲ್ಲ. ಆದ್ದರಿಂದ ಇಲ್ಲಿಗೆ ಪೂಜೆಗೆ ಬಂದವರಿಗೆ ಸಿಒಡಿಪಿಯ ಮಾತ್ರವಲ್ಲ ಇತರ ಮಾಹಿತಿಗಳು ಸಿಗುವುದಿಲ್ಲ.
- ಸಿಒಡಿಪಿಯ ಸಾಲದ ನೆರವುವನ್ನು ಸ್ನಾತಕ ವಿಭಾಗದ ಪುನರ್‌ವರ್ತಿತ ೨೦೨ ವಿದ್ಯಾರ್ಥಿಗಳು ಹಾಗೂ ೧೫೦ ಹೊಸ ವಿದ್ಯಾರ್ಥಿಗಳು ಸೇರ್ಪಡೆಯಾಗಿದ್ದಾರೆ. ಅಂದರೆ ಸ್ನಾತಕ ಪದವಿಗೆ ಒಲವು ಹೆಚ್ಚಿನವರು ತೋರಿಸುವುದಿಲ್ಲ ಎಂಬುದನ್ನು ಕಂಡುಕೊಳ್ಳಲಾಗಿದೆ. ಸ್ನಾತಕೋತ್ತರ ಪದವಿಗೆ ಪುನರ್‌ವರ್ತಿತ ಸಂಖ್ಯೆ ೯೪ ಇದ್ದಲ್ಲಿ ಹೊಸತ್ತು ೧೪೩ ವಿದ್ಯಾರ್ಥಿಗಳು ಸಾಲವನ್ನು ಪಡೆದುಕೊಂಡಿದ್ದಾರೆ. ಅಂದರೆ ೪೯ ಹೆಚ್ಚು ವಿದ್ಯಾರ್ಥಿಗಳು ಸಾಲವನ್ನು ಪಡೆದಿದ್ದಾರೆ. ಸ್ನಾತಕ್ಕೋತ್ತರ ಹೆಚ್ಚಿನ ಖರ್ಚುವಿದ್ದ ಕಾರಣ ಸಾಲ ಪಡೆಯುತ್ತಾರೆ ಎಂದು ಈ ಅಧ್ಯಯನದಿಂದ ಕಂಡುಕೊಳ್ಳಲಾಗಿದೆ. ಇಂಜಿನಿಯರಿಂಗ್ ಸಾಲ ಪಡೆದುಕೊಂಡವರ ಸಂಖ್ಯೆ ಇಳಿದಿದೆ. ೧೮೫ ವಿದ್ಯಾರ್ಥಿಗಳು ಸಾಲ ಜನ ಪುನರ್‌ವರ್ತಿಸಿದರೆ ಹೊಸ ೧೦೬ ಜನ ವಿದ್ಯಾರ್ಥಿಗಳು ಸಾಲವನ್ನು ಪಡೆದಿದ್ದಾರೆ ಅಂದರೆ ೭೯ ಜನರು ಕಡಿಮೆಯಾಗಿದ್ದರೆ. ಇಂಜಿನಿಯರಿಂಗ್ ಕುಸಿದ ಮಾರುಕಟ್ಟೆಯಿಂದ ಹೆಚ್ಚಿನ ವಿದ್ಯಾರ್ಥಿಗಳು ಬೇರೆ–ಬೇರೆ ಕೋರ್ಸಿಗೆ ಒಲವು ತೋರಿಸುತ್ತಾರೆ ಎಂದು ತಿಳಿದು ಬಂದಿದೆ.

- ಮೆಡಿಕಲ್‌ಗೆ ೧೯ ಜನ ವಿದ್ಯಾರ್ಥಿಗಳು ಪುನರ್‌ವರ್ತಿತ ಸಾಲವನ್ನು ಪಡೆದಿದ್ದಾರೆ. ಕೇವಲ ೯ ಜನ ವಿದ್ಯಾರ್ಥಿಗಳು ಹೊಸ ಸಾಲವನ್ನು ಪಡೆದಿದ್ದಾರೆ. ಮೆಡಿಕಲ್‌ನ ಪ್ರವೇಶ ಪರೀಕ್ಷೆಯ ನಿಯಮಗಳು ಕಠಿಣವಾಗಿ ಜಾಸ್ತಿ ಮಂದಿ ವಿದ್ಯಾರ್ಥಿಗಳಿಗೆ ಪ್ರವೇಶ ಸಿಗದ ಕಾರಣ ಸಾಲದಲ್ಲಿ ಸಹ ಈ ಕೋರ್ಸಿನ ವಿದ್ಯಾರ್ಥಿಗಳ ಸಂಖ್ಯೆ ಕಡಿಮೆಯಾಗಿದೆ ಎಂದು ಈ ಅಧ್ಯಯನದಿಂದ ಹೇಳಲಾಗಿದೆ.

- ಸಾಲಪಡೆಯಲು ವಿದ್ಯಾರ್ಥಿಗಳಿಗೆ ಒಂದು ತಿಂಗಳು ಬೇಕಾಯಿತು ಎಂದು ಮಾಹಿತಿ ಇದ್ದು ಅರ್ಜಿಗೆ ವಾಳೆಯ ಗುರಿಕಾರ ಅಥವಾ ಚರ್ಚಿನ ಮುಖ್ಯಗುರುವಿನ ಸಹಿ ಹಾಕುವಾಗ ವಿಳಂಬವಾಗಿ ಅರ್ಜಿಯನ್ನು ಸಲ್ಲಿಸುವಾಗ ಅನಗತ್ಯ ಸಮಯ ವ್ಯರ್ಥವಾಗಿದೆ. ಆದರೆ ವಿದ್ಯಾರ್ಥಿ ಕ್ಷೇಮವೇ ಈ ಯೋಜನೆಯ ಉದ್ದೇಶವಾದ ಕಾರಣ ದಾಖಲೆಗಳನ್ನು ಒಮ್ಮೆಲೆ ನೀಡಲು ಅಸಾಧ್ಯವಾದಾಗ ಸಿಒಡಿಪಿಯು ದಾಖಲೆಗಳನ್ನು ಮತ್ತೆ ಕೇಳಿ ವಿದ್ಯಾರ್ಥಿಗಳಿಗೆ ಸಹಕಾರಿಯಾಗಿದೆ. ಅಂತೆಯೇ ಸಿಒಡಿಪಿಯು ವಿದ್ಯಾರ್ಥಿಗಳಿಂದ ಏನನ್ನೂ ಅಪೇಕ್ಷಿಸಿಲ್ಲ ಎಂದು ಈ ಅಧ್ಯಯನದಿಂದ ತಿಳಿದುಬಂದಿದೆ.

- ಸಿಒಡಿಪಿಯ ಸಾಲದ ನಿಯಮಗಳು ಇತರ ಬ್ಯಾಂಕ್ ಸೌಲಭ್ಯಕ್ಕೆ ತುಲನೆ ಮಾಡಿದಾಗ ಸಿಒಡಿಪಿಯ ನಿಯಮಗಳು ಸುಲಭವಾಗಿವೆ ಹಾಗೂ ವಿದ್ಯಾರ್ಥಿಸ್ನೇಹಿಯಾಗಿವೆ ಎಂದು ಕಂಡುಕೊಳ್ಳಲಾಗಿದೆ.

- ಸಿಒಡಿಪಿಯ ಸಾಲ ಯೋಜನೆಯಲ್ಲಿ ಯಾವುದೇ ಬೆಲೆಬಾಳುವ ವಸ್ತು ಅಥವಾ ಜಾಗವನ್ನು ಅಥವಾ ಸರ್ಟಿಫಿಕೇಟ್ ಅಡವಿಡಲಿಕ್ಕಿರುವುದಿಲ್ಲ. ಆದ್ದರಿಂದ ವಿದ್ಯಾರ್ಥಿಗಳು ಈ ಸಾಲಯೋಜನೆಯನ್ನು ಬಹಳ ಸುಲಭವಾಗಿ ಪಡೆಯಬಹುದು ಎಂದು ಅಭಿಪ್ರಾಯಿಸಲಾಗಿದೆ.

- ಮಂಗಳೂರಿನಲ್ಲಿ ಕ್ರಿಶ್ಚಿಯನ್ ಸಮುದಾಯದ ರಾಜಕೀಯ ಪ್ರಭಾವಿ ವ್ಯಕ್ತಿಗಳಿರುವಾಗ ಅವರಿಂದ ಸ್ಥಳೀಯ ಮಟ್ಟದಲ್ಲಿ ಹಾಗೂ ಉನ್ನತ ಮಟ್ಟದಲ್ಲಿ ಸಾಲ ನೀಡುವಾಗ ಪ್ರಭಾವಕ್ಕೆ ಸಿಒಡಿಪಿಯು ಒಳಗಾಗಿದೆ ಎಂದು ಕಂಡುಕೊಳ್ಳಲಾಗಿದೆ.

- ಸಿಒಡಿಪಿಯ ಸಾಲದ ಒಪ್ಪಂದದ ಪ್ರಕಾರ ಶಿಕ್ಷಣ ಮುಗಿಸಿದ ೧೮ ತಿಂಗಳ ಒಳಗೆ ಸಾಲವನ್ನು ಮರುಪಾವತಿಸಬೇಕು. ಇಲ್ಲವಾದರೆ ವಾರ್ಷಿಕ ೨೪% ಬಡ್ಡಿದರವನ್ನು ನೀಡಬೇಕಾಗುತ್ತದೆ. ಶಿಕ್ಷಣ ಮುಗಿದ ತಕ್ಷಣವೇ ಕೆಲಸ ದೊರೆಯದಿದ್ದಾಗ ಸಾಲ ಹಿಂದೆ ನೀಡಲು ೫೫.೫೫% ವಿದ್ಯಾರ್ಥಿಗಳಿಗೆ ಕಷ್ಟವಾಗುತ್ತದೆ ಎಂದು ಈ ಅಧ್ಯಯನದಿಂದ ತಿಳಿದುಬಂದಿದೆ.

- ಸಾಲವನ್ನು ಮರುಪಡೆಯಲು ಸಿಒಡಿಪಿಯವರು ಕಾಗದ, ಎಸ್‌ಎಂಎಸ್, ಫೋನ್ ಮುಖಾಂತರ ಆಗಾಗ ಸಾಲ ಪಡೆದುಕೊಂಡವನು ಸಾಲ ಮರುಪಾವತಿಸಲು ನೆನಪಿಸುತ್ತಾರೆ. ಸಾಲ ಪಡೆದುಕೊಂಡವರು ಸಾಲ ಹಿಂದೆ ಸಕಾಲಕ್ಕೆ ನೀಡಿದಲ್ಲಿ ಸಾಲದಾರರ ಚರ್ಚಿನ ಮುಖ್ಯ ಗುರುವಿಗೆ ಅಥವಾ ವಾಳೆಯ ಗುರಿಕಾರರಿಗೆ ತಿಳಿಸುತ್ತಾರೆ. ಚರ್ಚಿನ ಗುರುವಿಗೆ ಹಾಗೂ

ವಾಳೆಯ ಗುರಿಕಾರರಿಗೆ ತಿಳಿಸುವುದರಿಂದ ಸಾಲದವರು ಮುಜುಗರಗೊಳಗಾಗುತ್ತಾರೆ ಎಂದು ಈ ಅಧ್ಯಯನದಿಂದ ತಿಳಿದಿದೆ.

- ಶಿಕ್ಷಣಕ್ಕೆ ಸಿಒಡಿಪಿಯ ಹಣದ ಸೌಲಭ್ಯವಲ್ಲದೆ ಇತರ ಸರಕಾರದ ವಿದ್ಯಾರ್ಥಿ ವೇತನ ದೊರೆಯುತ್ತಿದ್ದು, ಆ ಹಣವನ್ನು ಸಿಒಡಿಪಿಗೆ ಸಾಲಕ್ಕೆ ವಜಾ ಮಾಡಲಾಗಿದೆ. ಆದ್ದರಿಂದ ಅವರವರಿಗೆ ಸಾಲ ಹಿಂದಿರುಗಿಸಲು ಸುಲಭವಾಗಿದೆ ಎಂದು ಈ ಅಧ್ಯಯನದಿಂದ ತಿಳಿದಿದೆ.

- ಇಂಜಿನಿಯರಿಂಗ್ ಹಾಗೂ ಮೆಡಿಕಲ್ ಪದವಿಗೆ ಸಿಒಡಿಪಿಯಿಂದ ೫೦,೦೦೦ ಹಾಗೂ ೧,೦೦,೦೦೦/- ಸಾಲ ಸೌಲಭ್ಯ ದೊರೆತಿದ್ದು, ಈ ಮೊತ್ತ ಸಾಕಾಗುವುದಿಲ್ಲ. ಆದ್ದರಿಂದ ವಿದ್ಯಾರ್ಥಿಗಳಿಗೆ ಸ್ವತಂತ್ರವಾಗಿ ಪದವಿ ಪಡೆಯಲು ಸಾಧ್ಯವಾಗುತ್ತಿಲ್ಲವೆಂದು ಈ ಅಧ್ಯಯನದಿಂದ ತಿಳಿದು ಬಂದಿದೆ.

- ಸಿಒಡಿಪಿಯ ಸಾಲ ಸೌಲಭ್ಯದ ನಿಯಮಗಳು ಸುಲಭವಾಗಿದ್ದು ಇತರ ಬ್ಯಾಂಕ್ ಸಾಲಕ್ಕಿಂತ ತ್ವರಿತವಾಗಿ ದೊರೆಯುತ್ತಿದೆ. ಇತರ ಬ್ಯಾಂಕು ಸಾಲಕ್ಕೆ ಜಾಗ ಅಥವಾ ಬೆಲೆಬಾಳುವ ಒಡವೆಗಳನ್ನು ಅಡವಾಗಿಡಬೇಕಾಗಿರುವುದರಿಂದ ದಾಖಲೆಗಳನ್ನು ಒದಗಿಸಲು ಸಮಯ ತಗಲುತ್ತದೆ. ಇಲ್ಲಿ ಈ ಯಾವುದೇ ದಾಖಲೆಗಳನ್ನು ನೀಡಲಾಗುವುದಿಲ್ಲದ ಕಾರಣ ಸಾಲವು ತ್ವರಿತವಾಗಿ ದೊರೆತು ಸಕಾಲದಲ್ಲಿ ಶಿಕ್ಷಣವನ್ನು ಪೂರೈಸಲು ವಿದ್ಯಾರ್ಥಿಗಳಿಗೆ ಸಾಧ್ಯವಾಗಿದೆ ಎಂದು ತಿಳಿದುಬಂದಿದೆ.

- ಎಂ.ಕಾಂ. ಬಿ.ಎಡ್, ಬಿಬಿಎಮ್, ನರ್ಸಿಂಗ್, ಬಿ.ಕಾಂ ಕಲಿತ ಎಲ್ಲರಿಗೂ ಉದ್ಯೋಗ ಬೇಗನೇ ದೊರೆಯುತ್ತಿದ್ದು, ಇಂಜಿನಿಯರಿಂಗ್ ಹಾಗೂ ಬಿ.ಎ., ಎಮ್.ಎ. ವಿದ್ಯಾರ್ಥಿಗಳಿಗೆ ಉದ್ಯೋಗ ಬೇಗನೇ ದೊರೆಯಲಿಲ್ಲ. ಆದ್ದರಿಂದ ಈ ವಿದ್ಯಾರ್ಥಿಗಳು ಸಿಒಡಿಪಿಯ ಸಾಲವನ್ನು ಮರುಪಾವತಿಸಲು ಕಷ್ಟವಾಗಿದೆ. ಸಿಒಡಿಪಿಯ ಸಾಲ ಪಡೆದುದರಲ್ಲಿ ೧೨ ಜನರಿಗೆ ಅಂದರೆ ೧೩.೩೩% ಪ್ರತಿಶತ ವಿದ್ಯಾರ್ಥಿಗಳಿಗೆ ಉದ್ಯೋಗ ಇನ್ನೂ ಸಿಗಲಿಲ್ಲ. ಶೇಖಡ ೨೫.೫೫% ವಿದ್ಯಾರ್ಥಿಗಳು ಸ್ವಂತ ಉದ್ಯೋಗ ಮಾಡುತ್ತಾರೆ. ಕೇವಲ ೨.೨೨% ವಿದ್ಯಾರ್ಥಿಗಳಿಗೆ ಸರಕಾರಿ ಉದ್ಯೋಗ ಸಿಕ್ಕಿದೆ ಎಂದು ಈ ಅಧ್ಯಯನದಿಂದ ತಿಳಿದುಬಂದಿದೆ.

- ಶಿಕ್ಷಣ ಮುಗಿದ ತಕ್ಷಣ ಸಾಲವನ್ನು ಹಿಂದೆ ಪಾವತಿಸಲು ನಿಗದಿತ ಸಮಯವಿದ್ದ ಕಾರಣ ಯಾವುದಾದರೂ ಒಂದು ಉದ್ಯೋಗ ತಕ್ಷಣ ಸಿಗಬೇಕಾಗಿದ್ದು ಯಾವುದೇ ತರದ ಉದ್ಯೋಗಕ್ಕೆ ಒಪ್ಪುವ ಸ್ಥಿತಿ ಸಾಲ ಪಡೆದುಕೊಂಡ ವಿದ್ಯಾರ್ಥಿಗಳಲ್ಲಿ ನಿರ್ಮಾಣವಾಗಿದೆ ಎಂದು ಈ ಅಧ್ಯಯನದಿಂದ ಕಂಡುಕೊಳ್ಳಲಾಗಿದೆ.

- ನರ್ಸಿಂಗ್ ಹಾಗೂ ಹೋಟೆಲ್ ಮೆನೇಜ್‌ಮೆಂಟ್ ಕಲಿತ ವಿದ್ಯಾರ್ಥಿಗಳಿಗೆ ಹೊರದೇಶದಲ್ಲಿ ಕೆಲಸ ದೊರೆತಿದೆ ಎಂದು ಈ ಅಧ್ಯಯನದಿಂದ ಕಂಡುಕೊಳ್ಳಲಾಗಿದೆ.

- ಸಿಒಡಿಪಿಯ ವಿದ್ಯಾರ್ಥಿ ಸಾಲ ಯೋಜನೆ ಎಡ್ಯುಕೇರ್ ಬಡ್ಡಿರಹಿತ ಸಾಲವನ್ನು ಸಮುದಾಯದ ವಿದ್ಯಾರ್ಥಿಗಳ ಏಳಿಗೆಗೆ ನೀಡುತ್ತಿದ್ದು ೯೦ ಜನರ ಮಾಹಿತಿಯಲ್ಲಿ ೮೪ ಜನ ಸಿಒಡಿಪಿಯ ಸಾಲದಿಂದ ಅವರ ಮನೆಯ ಒಟ್ಟಾರೆ ಅಭಿವೃದ್ಧಿಯಾಗಿದೆ ಎಂದು ತಿಳಿದಿದೆ.

- ಸಿಒಡಿಪಿಯ ಸಾಲ ದೊರೆದುದರಿಂದ ಪೋಷಕರಿಗೆ ಇತರ ಮಕ್ಕಳ ವಿದ್ಯಾಭ್ಯಾಸಕ್ಕೆ ಅನುಕೂಲವಾಗಿದ್ದು ಉಳಿದ ಮಕ್ಕಳ ವಿದ್ಯಾಭ್ಯಾಸದ ಹೊರೆಯಾಗಲಿಲ್ಲ ಎಂದು ತಿಳಿದು ಬಂದಿದೆ.
- ಸಿಒಡಿಪಿಯ ತನ್ನ ಯೋಜನೆಯ ಫಲಾನುಭವಿ ವಿದ್ಯಾರ್ಥಿಗಳಿಗೆ ವರ್ಷಾವಾರು ತಮ್ಮ ಜೀವನವನ್ನು ಹೇಗೆ ರೂಪಿಸಬಹುದು ಎಂಬುದರ ಬಗ್ಗೆ ಶಿಬಿರವನ್ನು ನಡೆಸುತ್ತಿದ್ದು, ಸಿಒಡಿಪಿಯ ಎಲ್ಲಾ ಫಲಾನುಭವಿ ವಿದ್ಯಾರ್ಥಿಗಳು ಕಡ್ಡಾಯವಾಗಿ ಭಾಗವಹಿಸಬೇಕಾಗುತ್ತದೆ. ಆದರೆ ಶೇಕಡಾ ೧೦% ವಿದ್ಯಾರ್ಥಿಗಳು ತಮ್ಮ ಜೀವನದ ಗುರಿ ಗೊತ್ತಿಲ್ಲ ಎಂದು ಮಾಹಿತಿ ನೀಡಿದ್ದಾರೆ ಎಂದು ಈ ಅಧ್ಯಯನದಿಂದ ತಿಳಿದು ಬಂದಿದೆ.

**೪.೩ ಮುಂದಿನ ಅಧ್ಯಯನಕ್ಕಾಗಿ ಸಲಹೆಗಳು**

ಈ ಮೇಲಿನ ಅಧ್ಯಯನಗಳ ಫಲಿತಗಳ ಆಧಾರದಲ್ಲಿ ಮುಂದಿನ ಅಧ್ಯಯನಕ್ಕಾಗಿ ಈ ಕೆಳಗಿನ ಸಲಹೆಗಳನ್ನು ನೀಡಲಾಗಿದೆ.

೧. ಪ್ರಸ್ತುತ ಅಧ್ಯಯನವು ಸಿಒಡಿಪಿಯ ಕೇವಲ ಒಂದು ಯೋಜನೆಯಾದ ಎಡ್ಯುಕೇರ್‌ಗೆ ಮಾತ್ರ ಸೀಮಿತವಾಗಿದ್ದು, ಸಿಒಡಿಪಿಯ ಇಡೀ ಯೋಜನೆಯ ಮಟ್ಟಕ್ಕೆ ವಿಸ್ತರಿಸಬಹುದು.

೨. ಸಿಒಡಿಪಿಯ ಇತರ ಯೋಜನೆಗಳ ಮೇಲೆ ಪ್ರತ್ಯೇಕವಾದ ಅಧ್ಯಯನವನ್ನು ನಡೆಸಬಹುದು.

೩. ಸಿಒಡಿಪಿಯ ಸಾಲ ಸೌಲಭ್ಯವನ್ನು ಇತರ ಎನ್‌ಜಿಒ ಗಳು ನೀಡುವ ಸಾಲಕ್ಕೆ ತುಲಾನಾತ್ಮಕವಾದ ಅಧ್ಯಯನವನ್ನು ನಡೆಸಬಹುದು.

೪. ಮಂಗಳೂರಿನ ಇತರ ಕ್ರಿಶ್ಚಿಯನ್ ಸಮುದಾಯದ ಎನ್‌ಜಿಒಗಳು ಹೇಗೆ ಸಮುದಾಯದ ವಿದ್ಯಾರ್ಥಿಗಳ ಶಿಕ್ಷಣಕ್ಕೆ ಸಹಾಯ ಮಾಡುತ್ತದೆ ಎಂಬ ಅಧ್ಯಯನ ನಡೆಸಲು ಅವಕಾಶವಿದೆ.

೫. ಸಿಒಡಿಪಿಯ ಸಾಲಯೋಜನೆಯ ಫಲಾನುಭವಿಗಳ ಜೀವನಮಟ್ಟದ ಬಗ್ಗೆ ಅಧ್ಯಯನ ನಡೆಸಬಹುದು.

**೪.೪ ಉಪಸಂಹಾರ:**

'ಕೆನರ ಶಾಂತಿ ಮತ್ತು ಅಭಿವೃದ್ಧಿ ಸಂಸ್ಥೆ' ಕಳೆದ ನಲ್ವತ್ತು ವರ್ಷಗಳಲ್ಲಿ ವಿವಿಧ ಅಭಿವೃದ್ಧಿ ಕಾರ್ಯಗಳ ಮುಖಾಂತರ ಸಮಾಜದ ಏಳಿಗೆಗಾಗಿ ವಿವಿಧ ಯೋಜನೆಗಳನ್ನು ರೂಪಿಸಿ ಕಾರ್ಯಗತಗೊಳಿಸಿದೆ. ಸಮಾಜದ ಅಭಿವೃದ್ಧಿ ಶಿಕ್ಷಣದಿಂದ ಸಾಧ್ಯ ಎಂದು ತಿಳಿದ ಸಿಒಡಿಪಿಯು ಉದಾರ ಮನಸ್ಸಿನ ವ್ಯಕ್ತಿಗಳ ದೆಸೆಯಿಂದ ತನ್ನ ಅಸ್ತಿತ್ವದಿಂದಲೇ ಬಡ ವಿದ್ಯಾರ್ಥಿಗಳಿಗೆ ವಿಧ್ಯಾಭ್ಯಾಸಕ್ಕೋಸ್ಕರ ಧನ ಸಹಾಯ ಮಾಡುತ್ತಿದೆ. ಶ್ರೀ ಮೈಕಲ್ ಡಿಸೋಜಾ ಎಂಬ ಉದಾರ ವ್ಯಕ್ತಿತ್ವದ ವ್ಯಕ್ತಿಯ ಧನಸಹಾಯದಿಂದ ಸಿಒಡಿಪಿಯು ತನ್ನ ಪ್ರತಿಷ್ಠಿತ ಯೋಜನೆ ಎಡ್ಯುಕೇರ್ ಮುಖಾಂತರ ಸಾವಿರಾರು ಬಡ ವಿದ್ಯಾರ್ಥಿಗಳಿಗೆ ಧನಸಹಾಯ ಮಾಡಿದೆ. ಅವರ ಏಳಿಗೆಗೆ ಬಡ್ಡಿರಹಿತ ಸಾಲ ನೀಡಿ ಅವರ ಶಿಕ್ಷಣವು ಸಕಾಲದಲ್ಲಿ ಆಗುವ ಹಾಗೆ ಅವರಿಗೆ ಪ್ರೋತ್ಸಾಹ

ನೀಡಿದೆ. ಈ ವಿದ್ಯಾರ್ಥಿಸಾಲದ ಬಗ್ಗೆ ಅಧ್ಯಯನ ಕೈಗೊಂಡು ನಿರ್ದಿಷ್ಟ ಉದ್ದೇಶಗನುಗುಣವಾಗಿ ಅಧ್ಯಯನವನ್ನು ಮಾಡಲಾಗಿದೆ. ೯೦ ಜನ ವಿದ್ಯಾರ್ಥಿಗಳಿಂದ ಮಾಹಿತಿ ಪಡೆದು ಮಾಹಿತಿಯನ್ನು ವಿಶ್ಲೇಷಿಸಿ ಫಲಿತಾಂಶಗಳನ್ನು ಕಂಡುಕೊಳ್ಳಲಾಗಿದೆ ಹಾಗೂ ಮುಂದಿನ ಅಧ್ಯಯನಕ್ಕೆ ಕೆಲವು ಸಲಹೆಗಳನ್ನು ಸಹ ನೀಡಲಾಗಿದೆ.

ಸಿಒಡಿಪಿಯ ಈ ಸಾಲ ಯೋಜನೆಯಿಂದ ಕ್ರಿಶ್ಚಿಯನ್ ಸಮುದಾಯದ ಅಭಿವೃದ್ಧಿಗೆ ಕಾರಣವಾಗಿದೆ. ವಾಳೆ, ಚರ್ಚು, ಪ್ರಾಂತ್ಯ ಹಾಗೂ ಡಯಾಸಿಜ್‌ನ ವ್ಯವಸ್ಥಿತ ಸಂಪರ್ಕಜಾಲ ಹಾಗೂ ಸಂಬಂಧದಿಂದ ಸಿಒಡಿಪಿಯ ಕೆಲಸ ಹಾಗೂ ಯೋಜನೆಗಳ ವ್ಯವಸ್ಥಿತವಾಗಿ ಜ್ಯಾರಿಯಲ್ಲಿದ್ದು ಈ ಯೋಜನೆಯ ಫಲಾನುಭವಿಗಳು ಸಿಒಡಿಪಿಯ ಬಗ್ಗೆ ಒಳ್ಳೆಯ ಅಭಿಪ್ರಾಯವನ್ನು ನೀಡಿದ್ದಾರೆ. ಮುಂದೆ ಈ ಸಂಸ್ಥೆಯಿಂದ ಅನೇಕ ವಿದ್ಯಾರ್ಥಿಗಳಿಗೆ ಪ್ರಯೋಜನವಾದಲ್ಲಿ ಸಮುದಾಯ ಅಭಿವೃದ್ಧಿ ಇನ್ನೂ ವ್ಯವಸ್ಥಿತವಾಗಿ ಆಗಬಹುದು.

## ಅನುಬಂಧ – ೧

## ಪ್ರಶ್ನಾವಳಿ

### ಭಾಗ: ೧

1. ಹೆಸರು
2. ವಿಳಾಸ
3. ಲಿಂಗ: ಪುರುಷ /ಸ್ತ್ರೀ
4. ವಿವಾಹಿತ/ಹಿತೆ: ಹೌದು/ಅಲ್ಲ
5. ಕುಟುಂಬ ಸದಸ್ಯರ ಸಂಖ್ಯೆ:
   4 ಕ್ಕಿಂತ ಕಡಿಮೆ
   4–7/7 ಕ್ಕಿಂತ ಮೇಲ್ಪಟ್ಟು
6. ಶಿಕ್ಷಣ:
   ಪದವಿಪೂರ್ವ/ಸಾಮಾನ್ಯ ಪದವಿ/ವೃತ್ತಿಪರ ಪದವಿ/ವೃತ್ತಿಪರ ಸ್ನಾತಕೋತ್ತರ
7. ಕುಟುಂಬದ ವಾರ್ಷಿಕ ಆದಾಯ: ಕೃಷಿ/ಖಾಸಾಗಿ/ಸರಕಾರಿ/ಉದ್ಯಮ
8. ಕುಟುಂಬದ ವಾರ್ಷಿಕ ಆದಾಯ: 50,000/50–100000/1,00,000– 3,00,000 ಮೇಲ್ಪಟ್ಟು

### ಭಾಗ: ೨

1. ಯಾವ ವಿಧದ ಶಿಕ್ಷಣಕ್ಕೆ ಸಿಒಡಿಪಿಯ ಸಾಲ ತೆಗೆದುಕೊಂಡಿದ್ದೀರಿ?
2. ಎಷ್ಟು ಸಾಲ ತೆಗೆದುಕೊಂಡಿದ್ದೀರಿ?
   50,000 ಕ್ಕಿಂತ ಕಡಿಮೆ/ 50,000–100,000–300,000
3. ಎಷ್ಟು ಬಡ್ಡಿದರ ಕಟ್ಟ ಬೇಕಾಗುತ್ತದೆ?
   2% ಕ್ಕಿಂತ ಕಡಿಮೆ/2–3%/4% ಕ್ಕಿಂತ ಜಾಸ್ತಿ/ಬಡ್ಡಿ ಇಲ್ಲ.
4. ತಮಗೆ ಈ ಸಾಲದ ಮಾಹಿತಿ ಹೇಗೆ ಸಿಕ್ಕಿತ್ತು? ಚರ್ಚ್‌ನಿಂದ/ಗೆಳೆಯರಿಂದ/ಶಾಲಾ ಕಾಲೇಜಿನಿಂದ/ಕುಟುಂಬ ದವರಿಂದ/ಸ್ವಂತ
5. ಸಾಲ ಪಡೆಯಲು ಎಷ್ಟು ದಿನಗಳು ಬೇಕಾದವು? ತಕ್ಷಣ ಸಿಕ್ಕಿತ್ತು/1–3/5/5ಕ್ಕಿಂತ ಜಾಸ್ತಿ
6. ಸಾಲ ಪಡೆಯಲು ಎಲ್ಲಾ ದಾಖಲೆಗಳನ್ನು ಒದಗಿಸಿದ್ದೀರಾ? ಹೌದು/ಇಲ್ಲ
7. ಸಾಲ ಪಡೆಯಲು ಪಾಲಕರ ಪ್ರೋತ್ಸಾಹ ಇದೆಯೆ? ಹೌದು/ಇಲ್ಲ
8. ತಮ್ಮ ಮನೆಯ ಬೇರೆ ಸದಸ್ಯರು ಸಿಒಡಿಪಿಯ ವಿದ್ಯಾರ್ಥಿ ಸಾಲ ಪಡೆದುಕೊಂಡಿದ್ದಾರೆಯೇ? ಹೌದು/ಇಲ್ಲ
9. ಈ ಸಾಲವನ್ನು ಹೇಗೆ ಹಿಂದಿರುಗಿಸುತ್ತೀರಿ? ಮನೆಯವರು/ಸ್ವಂತ ದುಡಿದು/ಚಿಂತಿಸಿಲ್ಲ
10. ಸಾಲ ಪಡೆಯಲು ಸಿಒಡಿಪಿಯವರು ಸೂಕ್ತವಾದ ಮಾಹಿತಿ ನೀಡಿದ್ದಾರೆಯೇ?–ಹೌದು/ಇಲ್ಲ
11. ಸಾಲ ಪಡೆಯಲು ಸಿಒಡಿಪಿಯವರು ಅನಗತ್ಯ ವಿಳಂಬ ಮಾಡಿದ್ದಾರೆಯೇ–ಹೌದು/ಇಲ್ಲ
12. ಸಾಲ ನೀಡುವಾಗ ನಿಮ್ಮ ಗೌಪ್ಯತೆಯನ್ನು ಕಾಪಾಡಿದ್ದಾರೆಯೇ? –ಹೌದು/ಇಲ್ಲ
13. ಸಿಒಡಿಪಿ ಯ ಸಾಲ ಯೋಜನೆ ಇತರ ಚರ್ಚ್ ಅಥವಾ ಚರ್ಚ್‌ನ ಸಂಘಗಳು ನೀಡುವ ಸಾಲಕ್ಕಿಂತ ಸುಲಭವಾಗಿದೆಯೇ? ಹೌದು/ಇಲ್ಲ
14. ಸಿಒಡಿಪಿಯ ಸಾಲ ಯೋಜನೆ ಬ್ಯಾಂಕಿನ ಸಾಲಕ್ಕಿಂತ ಸುಲಭವಾಗಿದೆಯೇ? ಹೌದು/ಇಲ್ಲ
15. ಸಿಒಡಿಪಿಯ ಸಾಲ ಯೋಜನೆಯ ನಿಯಮಗಳು ಕಷ್ಟಕರವಾಗಿದ್ದೆಯೇ? ಹೌದು/ಇಲ್ಲ

16. ಸಿಒಡಿಪಿಯ ಯೋಜನೆ ಪಡೆಯಲು ನಿಮಗೆ ಅರ್ಹತೆ ಇದೆಯೇ? ಹೌದು/ಇಲ್ಲ
17. ಸಿಒಡಿಪಿಯ ಸಾಲ ಯೋಜನೆಯನ್ನು ಅರ್ಹತೆ ಇಲ್ಲದವರಿಗೆ ನೀಡಿದ್ದಾರೆ? ಹೌದು/ಇಲ್ಲ
18. ಸಿಒಡಿಪಿಯ ಸಾಲ ಯೋಜನೆಯನ್ನು ನೀಡುವಾಗ ಸಂಸ್ಥೆಯು ಪಕ್ಷಪಾತ ಮಾಡಿದ್ದಾರೆಯೇ? ಹೌದು/ಇಲ್ಲ
19. ಸಿಒಡಿಪಿಯ ಸಾಲ ಯೋಜನೆಯಲ್ಲಿ ಪ್ರಭಾವಿ ವ್ಯಕ್ತಿಗಳ ಪ್ರಭಾವವಿದ್ದರೆ ಸುಲಭವಾಗಿ ಸಾಲ ದೊರೆಯುತ್ತಿದೆಯೇ? –ಹೌದು/ಇಲ್ಲ
20. ಸಿಒಡಿಪಿಯು ತನ್ನ ಫಲಾನುಭವಿ ವಿದ್ಯಾರ್ಥಿಗಳಿಂದ ಏನಾದರೂ ಅಪೇಕ್ಷಿಸುತ್ತಿದೆಯೇತ್ತಿದೆಯೇ? ಹೌದು/ಇಲ್ಲ
21. ಸಿಒಡಿಪಿಯ ಸಾಲ ಯೋಜನೆಯನ್ನು ಬೇರೆ ವಿದ್ಯಾರ್ಥಿಗಳಿಗೆ ತಿಳಿಯಬಯಸುತ್ತೀರಾ? ಹೌದು/ಇಲ್ಲ
22. ಸಿಒಡಿಪಿಯ ಸಾಲ ಯೋಜನೆಯ ಫಲಾನುಭವಿಯಾದ ತಾವು ಬೇರೆ ವಿದ್ಯಾರ್ಥಿಗಳಿಗೆ ಸಹಾಯ ಮಾಡುತ್ತೀರಾ? ಹೌದು/ಇಲ್ಲ
23. ಜೀವನದಲ್ಲಿ ಯಾವ ಕೆಲಸದ ಗುರಿಯನ್ನು ಹೊಂದಿದ್ದೀರೀ?

ಅನುಬಂಧ – ೨

ಸಿ.ಒ.ಡಿ.ಪಿ.ಯ ವಿದ್ಯಾರ್ಥಿ ಸಾಲ ಯೋಜನೆಯ ಒಪ್ಪಂದ ಕರಾರು ಪತ್ರ

# LETTER OF UNDERTAKING

To,
Mr. Michael D Souza
C/o CODP (Canara Organization of Development and Peace)
Nanthoor, Kadri Hills, Bejai Post, Mangalore 575004

(1) (Name of student), aged about years, son/daughter of Vinoda Santhis residing at, God's gift house, Jaison compound, Jeppu Kudupadi Mangalore studying B Ed (Course) St. Ann's College (Name of the College / Institute), hereinafter referred to as 'STUDENT'

and

(2) Mr/Mrs Alice D Souza the STUDENT residing at the above address standing as Guarantor, hereinafter referred to as 'GUARANTOR'.

(1) and (2) hereinafter, are jointly referred to as 'FIRST PARTY',

WHEREAS, Mr. Michael D'Souza, through the offices of CODP (Canara Organization for Development and Peace) Nanthoor, Kadri Hills, Bejai, Mangalore-575 004 (hereinafter referred to as 'SECOND PARTY') intends to provide financial assistance to the economic weaker students who are unable to pursue their studies for pure financial reasons, on certain terms and conditions.

WHEREAS, the STUDENT is in need of financial help for his/her higher education and hence FIRST PARTY has approached the SECOND PARTY for financial assistance and the SECOND PARTY has agreed to provide financial assistance and advance money from time to time to the STUDENT subject to certain terms and conditions. The STUDENT has unde5rtaken to pay the entire financial assistance received by him/her from time to time from the SECOND PARTY and the GUARANTOR guarantees payment of all outstanding financial assistance which the SECOND PARTY has advanced to the STUDENT from time to time and which is due from the STUDENT. Hence the FIRST PARTY is executing this letter of undertaking.

1. We, the FIRST PARTY already received a sum of Rs.Q 1,00,000/- (Rupees One Lakh Only Only) as financial assistance for the academic years 2015-16 and we the FIRST PARTY acknowledged the receipt of the same.

2. Now for the academic year 2016-17 we, the FIRST PARTY have again received a sum of Rs.1,00,000/- (Rupees one lakh only) for the higher education of the STUDENT. Hence we the FIRST PARTY promise to repay the total Rs. 2,00,000/-(Rupees Two Lakh Only) within 18 months after completion of the STUDENT'S education without causing any inconvenience to the SECOND PARTY.

3. We the FIRST PARTY shall repay the loan amount sanctioned to us as per the conditions of the loan release and shall never fail in our commitment to do so.

4. That we, the FIRST PARTY shall inform the SECOND PARTY regarding any change in the information supplied by us in our application and shall inform regarding any change of address without fail.

5. That I, the STUDENT will maintain good character and integrity in and outside the college campus and shall effectively attempt to be the ideal student of my institute. I will perform to the best of my ability and will strive to excel in my studies.

6. I, the STUDENT undertake to come out highly successful in my curricular, co-curricular and extra-curricular activities and shall maintain high academic track record.

7. I, the STUDENT will attend the classes very regularly.

8. That I, the STUDENT will submit all relevant records, Viz., statement of attendance, statement of marks, character certificate etc., to the SECOND PARTY when called for.

9. That I, the STUDENT will participate in the motivational and other useful mandatory programs organized by the SECOND PARTY in the interest of the STUDENT. Further I, understand that the SECOND PARTY has the right to deny future assistance if the STUDENT fails to participate in these mandatory programs.

10. That I, the STUDENT shall utilize the entire financial assistance received from the SECOND PARTY exclusively for the educational expenses and shall keep all such necessary documents and receipts/vouchers and shall submit the copies of the same to the SECOND PARTY when called for.

11. That I, the STUDENT understand the spirit behind the sanction of financial assistance which is repayable by myself, and shall enthusiastically attempt to take forward the same spirit of reaching out to the marginalized and help other less privileged brethren of our community in the future.

12. That I, the STUDENT understands that although the repayment period has been set as 18 months from the date of completion of the education, the SECOND PARTY has the full authority to call for the refund/repayment of the full/partial amount by issuing a written request if the SECOND PARTY identifies a breach of any of the terms and conditions specified herein or has provided false information in his application form with respect to his economic situation.

13. In the event the STUDENT fails to repay the amount within 18 months from the date of completion of the education, I the GUARANTOR is liable to pay this amount on behalf of the STUDENT.

14. In the event the FIRST PARTY fails to repay the amount within 18 months from the date of completion of the education of the STUDENT, or failing to

refund/repay the supported payment at the request of SECOND PARTY, the FIRST PARTY hereby authorizes the SECOND PARTY to proceed with any further action that it may like to take to recover this amount, which may include appropriate contacts/communicate with Parish Priest, Parish Pastoral Council, Bank or any other persons connected with this support or consider legal action for recovery purposes.

15. We the FIRST PARTY declare that this letter of undertaking is valid until all amounts under this undertaking are paid and the SECOND PARTY issues a 'CLEARANCE LETTER' specifying that there are no further dues from the FIRST PARTY.

16. That I, the STUDENT hereby authorize the SECOND PARTY to debit my account with MCC Bank for the recoveries of the support I have received and to make balance or any other enquiries pertaining to my account with MCC Bank. In witness thereof we have affixed our signature to this letter of undertaking on this the 3rd October 2016 at CODP, Kadri Hills, Nanthoor, Bejai Post, Mangalore-575 004.

| Student has to sign across the photo | LTI of Student |
|---|---|

**1. Student**

Signature :

Name :

Contact :

Address :

**2. Parent Guarantor**

Signature :

Name :

Contact :

Address :

**3. Witness**

Signature :

Name :

Contact :

Address :

## ಪರಾಮರ್ಶನ ಪಟ್ಟಿ

ಅಕಿತ್–ಉರ್–ರಾಹಮನ್ ಎಸ್ ಎಮ್, ಇಫೆಕ್ಟ್ ಎಂಡ್ ಇಂಮ್‌ಪೆಕ್ಟ್ ಆಫ್ ಎನ್.ಜಿ.ಓ ಇನ್ ಮೊಡರ್ನ್ ವರ್ಲ್ಡ್, ಅಡಿ ಪಬ್ಲಿಕೇಷನ್: ಡೆಲ್ಲಿ, 2011.

ಅರ್‌ಗುವಾ, ಕಮ್ಯುನಿಟಿ ಆರಗ್ನೈನೇಷನ್ ಎಂಡ್ ಸೋಸಿಯಲ್ ಆ್ಯಕ್ಷನ್, ಸೆಂಚೂರು ಪ್ರೇಸ್: ಬೆಂಗಳೂರು, 2013.

ಅನಿತಾ ಅಬ್ರಾಹಮ್, ಎನ್.ಜಿ.ಓ–ನೋನ್ ಗಾವರ್ನ್‌ಮೆಂಟಲ್ ಆರ್‌ಗೈನೇಷನ್, ಯುನಿವರ್ಸಲ್ ಲಾ ಪಬ್ಲಿಕೇಷನ್ ಕಂ: ಪಬ್ಲಿಕೇಷನ್ ಕಂ: ಡೆಲ್ಲಿ, 2011

ಎಚಾರ್ಕೆ ಮತ್ತು ಎಜ್ಜಿಪ್ಪಿಜಿ, ಅಭಿವೃದ್ಧಿ ಅರ್ಥಶಾಸ್ತ್ರ, ಸಪ್ನ ಬುಕ್‌ಹೌಸ್: ಬೆಂಗಳೂರು, 2004.

ಎನ್.ಕೆ. ಚಿದಾನಂದ ಸೊರಬ, ಶಿಕ್ಷಣದ ತತ್ವಶಾಸ್ತ್ರ ಮತ್ತು ಸಮಾಜ ಶಾಸ್ತ್ರ, ವಿಸ್ಮಯ ಪ್ರಕಾಶನ: ಮೈಸೂರು, 2015.

ಎನ್.ಎಸ್. ಪಾವತ್, ಜೆ.ಬಿ.ಅಂಬೆಕಾರ್ ಮತ್ತು ಶ್ರೀಕಾಂತ್, ಎನ್‌ಜಿ.ಓ. ಎಂಡ್ ಡೆವಲಪ್‌ಮೆಂಟ್, ರಾವತ್ ಪಬ್ಲಿಕೇಷನ್: ಜೈಪುರ್, 2004.

ಎಲ್.ಕೆ.ಸಿಂಗ್, ಎನ್.ಜಿ.ಬಿ. ಡೆವಲಪ್‌ಮೆಂಟ್ ಎಂಡ್ ದ ಥರ್ಡ್ ವರ್ಲ್ಡ್, ಕುನಲ್ ಬುಕ್ಸ್: ನ್ಯೂಡೆಲ್ಲಿ, 2011.

ಎಚ್.ಆರ್. ಕೃಷ್ಣಮೂರ್ತಿ ಹೊಸಬೀಡು, ಕರ್ನಾಟಕ ಆರ್ಥಿಕತೆ, ಸಪ್ನಾ ಬುಕ್ ಹೌಸ್: ಬೆಂಗಳೂರು, 2015.

ಎಂ ಚಂದ್ರಪೂಜಾರಿ, ಸಂಶೋಧಕರು ಮತ್ತು ಕ್ಷೇತ್ರ ಕಾರ್ಯ, ಪ್ರಸರಾಂಗ ಕನ್ನಡ ವಿಶ್ವವಿದ್ಯಾಲಯ: ಹಂಪಿ 2005.

ಎಂ ಚಂದ್ರಪೂಜಾರಿ, ಸಮಾಜ ಸಂಶೋಧನೆ, ಪ್ರಸರಾಂಗ ಕನ್ನಡ ವಿಶ್ವವಿದ್ಯಾಲಯ:ಹಂಪಿ, 2005

ಎಂ ಚಂದ್ರಪೂಜಾರಿ, ಸಂಶೋಧನೆ ಏನು? ಏಕೆ? ಹೇಗೆ?, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ: ಹಂಪಿ, 2009.

ಎಂ ಚಂದ್ರಪೂಜಾರಿ, ಸಂಶೋಧನ ಜವಾಬ್ದಾರಿ, ಪ್ರಸರಾಂಗ ಕನ್ನಡ ವಿಶ್ವವಿದ್ಯಾಲಯ; ಹಂಪಿ, 2008.

ಎಂ ಚಂದ್ರಪೂಜಾರಿ, ಸಂಶೋಧನ ಪ್ರಸ್ತಾವ, ಪ್ರಸರಾಂಗ ಕನ್ನಡ ವಿಶ್ವವಿದ್ಯಾಲಯ: ಹಂಪಿ, 2008.

ಬಿ.ಸುಬ್ರಮಣ್ಯ, ಸಾಮಾಜಿಕ ಸಮಸ್ಯೆಗಳು,. ಸಪ್ನಾಬುಕ್ ಹೌಸ್: ಬೆಂಗಳೂರು, 2015.

ಬಿ.ಟಿ.ಲಾವನಿ, ಎನ್.ಜಿ.ಓ ಇನ್ ಡೆವಲಪ್‌ಮೆಂಟ್, ರಾವತ್ ಪಬ್ಲಿಕೇಷನ್: ಜೈಪುರ್, 1999.

ಡೆವಿಡ್ ಲೂವಿಸ್ ಮತ್ತು ರವಿಚಂದ್ರ, ಎನ್.ಜಿ.ಓ ಎಂಡ್ ಸೋಶಿಯಲ್ ವೆಲ್‌ಫೇರ್, ರಾವತ್ ಪಬ್ಲಿಕೇಷನ್: ಜೈಪುರ್, 2008.

ಜೋಶಿ ಜಿ.ವಿ. ಕರಾವಳಿ ಕರ್ನಾಟಕದ ಅರ್ಥವ್ಯವಸ್ಥೆ: ಹಿಂದಿನ ಅನುಭವಗಳು ಮತ್ತು ಇಂದಿನ ವಿದ್ಯಮಾನಗಳು: ಜೋಶಿ ಜಿ.ವಿ ಮತ್ತು ನೋರ್ಬರ್ಟ್ ಲೋಬೊ(ಸಂ) ಕರಾವಳಿ ಕರ್ನಾಟಕದ ಅರ್ಥವ್ಯವಸ್ಥೆ: ಹಿಂದಿನಿಂದ ಇಂದಿನವರೆಗೆ, ಮಂಗಳ ಪ್ರಕಾಶನ: ಮಂಗಳೂರು, 2009.

ಪ್ರಾನ್ಸಿಸ್, ನಾನ್ ಗವರ್ನ್‌ಮೆಂಟ್, ರಾವತ್ ಪಬ್ಲಿಕೇಷನ್: ಜೈಪುರ್, 2003.

**ಪತ್ರಿಕೆಗಳು**

ಉದಯವಾಣಿ, ಕನ್ನಡ ದೈನಿಕ, ವಿವಿಧ ಸಂಚಿಕೆಗಳು.

ವಿಜಯಕರ್ನಾಟಕ, ಕನ್ನಡ ದೈನಿಕ, ವಿವಿಧ ಸಂಚಿಕೆಗಳು

ಪ್ರಜಾವಾಣಿ, ಕನ್ನಡ ದೈನಿಕ, ವಿವಿಧ ಸಂಚಿಕೆಗಳು

ದಿ ಹಿಂದು, ಇಂಗ್ಲಿಷ್ ದೈನಿಕ, ವಿವಿಧ ಸಂಚಿಕೆಗಳು

ಸುದ್ದಿ ಬಿಡುಗಡೆ, ಬೆಳ್ತಂಗಡಿ, ಸುಳ್ಯ, ಪುತ್ತೂರು–ಕನ್ನಡವಾರು ಪತ್ರಿಕೆ, ವಿವಿಧ ಸಂಚಿಕೆಗಳು

**ಅಂತರ್ಜಾಲ ತಾಣಗಳು**

http://www. *Atik-ur-rohomans.m Effect- andinpacts of NGO'S in modern World, Aadi Publications, Jaipur* – 2011.

http://www www simile foundationindia /Smt/Janaki-vasant-11 month 2017.

http://www www Dharmayothisc.org.